# ಮುನ್ನುಡಿ.

ಇಪ್ಪತ್ತೈದು ವರ್ಷಗಳತ್ತಣಿಂದ ಈಚೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮುದ್ರಿತವಾಗುತ್ತಲಿದ್ದ ಪುಸ್ತಕಗಳ ಮುಖವನ್ನು ಪೀಠಿಕೆಯ ಬುಲಾಕಿನಿಂದ ಇಲ್ಲವೆ ಉಪೋದ್ಘಾತದ ನತ್ತಿನಿಂದ ಅಲಂಕರಿಸುವ ರೂಢಿಯನ್ನು ಮೆಲ್ಲನೆ ಹಿಂದಕ್ಕೆ ತಳ್ಳಿಬಿಟ್ಟು, ಕೃತಿಗಳಿಗೆ ಮುನ್ನುಡಿಯ ಮೂಗುತಿಯನ್ನು ಇಡುವ ಆಚರಣೆಯನ್ನೊ ಅನುಕರಣವನ್ನೊ ಮಾಡಿದವರಲ್ಲಿ ಶ್ರೀಮಾನ್ ಎಂ. ಎನ್. ಕಾಮತರೇ ಮೊದಲಿಗರೆಂಬದಾಗಿ ನನ್ನ ನೆನಪು. ಅಲ್ಲಿಂದ ಇತ್ತ ಮುನ್ನುಡಿ ಮತ್ತು ಪೀಠಿಕೆ, ಮುನ್ನುಡಿ ಮತ್ತು ಉಪೋದ್ಘಾತ, ಎಂಬ ಜೋಡು ಒಡವೆಗಳನ್ನು ತೊಟ್ಟುಕೊಂಡೇ ಅನೇಕ ಗ್ರಂಥಗಳು ಹೊರಬರುವುದು ರೂಢಿಯಾಗಿದ್ದರೂ, ಆ ಮುನ್ನುಡಿಯನ್ನು ಎರವಲು ತರುವ ಅಭ್ಯಾಸವು ತೀರ ಇತ್ತಲಾಗಿನದೆಂದು ನನ್ನ ಊಹೆ. ಆದುದರಿಂದ ಲೇಖನಕ್ಕೆ ಮುನ್ನುಡಿಯೊಂದನ್ನು ಬರೆಯುವುದೆಂದರೆ ಹಳಬನಾದ ನನಗೆ ಹೊಸದಾಗಿ ಕಲಿಯತಕ್ಕ ಬಿನ್ನಾಣವೇ ಸರಿ! ಮುನ್ನುಡಿಯ ಉದ್ದೇಶವೇನು? ಈ ಚಿಕ್ಕ ರೂಪಕಗಳನ್ನು ಬರೆದ ಶ್ರೀಮಾನ್ ಕೋಟ ಶಿವರಾಮ ಕಾರಂತರ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಡುವುದೇ? ಸಕಲ ಕರ್ನಾಟಕಕ್ಕೆ ಇದಕ್ಕಿಂತ ಮೊದಲೇ ಕಾರಂತರು ಪರಿಚಿತರಾದ ಮಹನೀಯರಷ್ಟೆ! ಮುನ್ನುಡಿಗಾರನು ರೂಪಕದ ಕಥಾನಕವನ್ನು ಟೀಕಿಸಬೇಕೇ? ಅದು ವಿಮರ್ಶಕನ ಕಾರ್ಯ, ನನ್ನದಲ್ಲ. ಮುನ್ನುಡಿಯಿಂದ ಕೃತಿಯನ್ನು ಉಬ್ಬಿಸಿ ಅದನ್ನು ಪ್ರಸಿದ್ಧಿಯ ತುದಿಗೆ ಏರಿಸಬೇಕೇ? ಅದು ಸಾಧ್ಯವೇ ಇಲ್ಲ; ಏಕೆಂದರೆ ನನ್ನ ಮುನ್ನುಡಿಯಿಂದ ಕೃತಿ ಪ್ರಶಸ್ತಿ ಆಗುವುದಕ್ಕಿಂತ ಪ್ರಕೃತದಲ್ಲಿ ಕಾರಂತರ ಕೃತಿಯಿಂದ ನನ್ನ ಮುನ್ನುಡಿಗೆ ಪ್ರಸಿದ್ಧಿ ಬರುವ ಸಂಭವವೇ ಹೆಚ್ಚು. ನಮ್ಮಲ್ಲಿಯು

ಹಳ್ಳಿಜನಗಳ ಜೀವನರಹಸ್ಯವನ್ನು ಸ್ವಾಭಾವಿಕವಾಗಿ, ಸುಂದರವಾಗಿ, ಸರಳವಾಗಿ ಹೇಗೆ ಚಿತ್ರಿಸಬೇಕೆಂಬುದನ್ನು ಮುನ್ನುಡಿಯು ವಾಚಕರಿಗೆ ನಿದರ್ಶಿಸಬೇಕಾಗಿದ್ದರೆ ವಾಚಕಮಹಾಶಯರು ಈ ರೂಪಕವನ್ನು ಓದಿಯೇ ಶ್ರೀಮಾನ್ ಕಾರಂತರ ನಾಟಕ ಕೌಶಲವನ್ನು ನೋಡಿ ಸಮಾಧಾನಪಡಬೇಕು. 'ಹಣೆಬರಹ,' 'ನಾರದ ಗರ್ವಭಂಗ,' 'ಕಟ್ಟೆಪುರಾಣ' ಮೊದಲಾದ ರೂಪಕಗಳಲ್ಲಿ ಬರುವ ಪಾತ್ರಗಳ ಮಾತೃಕೆಗಳನ್ನು ನಾವು ನಮ್ಮ ಹಳ್ಳಿಗಳಲ್ಲಿ ಆಗಾಗ ಕಾಣುತ್ತೇವೆ, ಕೂಡಲೇ ಮರೆಯುತ್ತೇವೆ. ಏಕೆಂದರೆ, ಆ ವ್ಯಕ್ತಿಗಳ ಸರಳ ಜೀವನವು ನಮ್ಮ ಲಕ್ಷ್ಯಾರ್ಹವೆಂದು ತಿಳಿಯುವಷ್ಟು ನಮ್ಮಲ್ಲಿ ಅನೇಕರಿಗೆ ದೃಷ್ಟಿಯು ವಿಶಾಲವಾಗಿಯೂ ಹೃದಯವು ಸಂಸ್ಕಾರವಾಗಿಯೂ ಇರುವುದಿಲ್ಲ. ಆದರೆ ಗ್ರಾಮಜೀವನದ ವಿವಿಧವಾದ ದೃಶ್ಯಗಳಲ್ಲಿ ಒಂದೊಂದನ್ನೇ ಎತ್ತಿತೆಗೆದು, ಅದರಲ್ಲಿ ಆವಶ್ಯಕವಿರುವಷ್ಟೇ ಪಾತ್ರಗಳನ್ನು ತಂದು ಹೊಂದಿಕೆಯಾಗಿ ಮೇಳವಿಸಿಕೊಂಡು, ಚೆಲುವಾಗಿ, ಅಕ್ಕರೆಯಿಂದ, ಜೀವನದ ಮಟ್ಟನ್ನು ಮೀರದೆ ಚಿತ್ರಿಸಿದರೆ, ಒಂದೊಂದು ಸನ್ನಿವೇಶವೂ ಕಣ್ಣ ಮುಂದೆ ಕಟ್ಟಿದಂತಾಗಿ ವ್ಯಕ್ತಿಗಳ ಮಾತುಗಳು ನಮ್ಮ ಕಿವಿಗಳಲ್ಲಿಯೇ ಯಾವಾಗಲೂ ನಿಲ್ಲುವುವು. ಇದರಿಂದ ಮೆಲ್ಲಮೆಲ್ಲನೆ, ತಿಳಿದು ತಿಳಿಯದೆ ಭಾವಶುದ್ಧಿಯೂ ಹೃದಯಸಂಸ್ಕಾರವೂ ಪ್ರಾಪ್ತವಾಗುವುವು. ಹೀಗೆ ಹಳ್ಳಿಯವರ ಜನಜೀವನವನ್ನು ಚಿತ್ರಿಸುವ ಸಣ್ಣ ಕಥೆಗಳನ್ನೂ ಚಿಕ್ಕ ನಾಟಕಗಳನ್ನೂ ಬರೆಯುವವರು 'ಕನ್ನಡ ವಾಙ್ಮಯಸ್ವಾಮಿಗಳು, ಕನ್ನಡ ಭಾಷಾಪ್ರೇಮಿಗಳು.' ದಕ್ಷಿಣ ಕನ್ನಡದ ಇಂಥವರಲ್ಲಿ ಪ್ರಥಮ ವರ್ಗಕ್ಕೆ ಸೇರತಕ್ಕವರು ಶ್ರೀಮಾನ್ ಕೋಟ ಶಿವರಾಮ ಕಾರಂತರು.

ಕದರೆ,<br>
ಆಂಗೀರಸ ಫಾಲ್ಗುಣ ಶುದ್ಧ ಅಷ್ಟಮಿ,<br>
ತಾ. ೪-೩-೧೯೩೩.

**ಪಂಜೆ ಮಂಗೇಶರಾವ್.**

---

# ಮುನ್ನುಡಿ.

ಇದೊಂದು ನವೀನ ಹಾದಿಯಲ್ಲಿ ಬರೆದ ನಾಟಕ. ಪೌರಾಣಿಕ ವ್ಯಕ್ತಿಯಾದ ನಾರದನಂಥ ಮುನಿಶ್ರೇಷ್ಠನನ್ನು ಭೂಲೋಕದ ಬೀದಿಯಲ್ಲಿ ತಿರುಗಾಡಿಸಿ, ಹೇಟು ಬೂಟನ್ನು ತೊಡಿಸಿ, ನಾಟಕ ಕಂಪೆನಿಯಲ್ಲಿ ಹೊಕ್ಕು ಹೊರಡಿಸುವಂಥ ಉದ್ಧಟ ಸಾಹಸವನ್ನು ಏಕೆ ಮಾಡಿದೆಯೆಂದು ಎಲ್ಲರೂ ರೇಗಬಹುದು. ಇದು ರಂಗಭೂಮಿಗೆ ಬಂದಿರುವ ನಾಟಕ. ಮೊದಲನೆ ಬಾರಿ ಕಂಡವರು ಇದೇ ರೀತಿಯಾಗಿ ಟೀಕಿಸಿದುದೂ ಉಂಟು. ಆದರೆ ಶಾಂತರೀತಿಯಿಂದ ವಿಚಾರಿಸಿದಲ್ಲಿ, ಈ ವ್ಯಂಗ್ಯನಾಟಕದ ಗುರಿಯು, ನಾರದನ ಟೀಕೆಯಲ್ಲ, ಅವನ ಗರ್ವಭಂಗವೂ ಅಲ್ಲವೆಂದು ತಿಳಿಯುವುದು; ಬದಲು ನಮ್ಮ ರಸಿಕತೆ, ನಮ್ಮ ನಾಟಕ, ನಮ್ಮ ಸಮಾಜದ ಟೀಕೆ. ಈ ನಾಟಕವನ್ನು ಆಕ್ಷೇಪಿಸುವ ಸಾಂಪ್ರದಾಯಿಕರ ಮುಂದೆ, ಪ್ರತ್ಯಕ್ಷ ಆ ನಾರದನು ಬಂದು, ತಾನು ಬಂದೆನೆಂದುದಾದರೆ, ವಾಮನ ಭೋಜರಾಯರಿಗೂ ಮಿಗಿಲಾಗಿ ಅವರೇ ಪರಿಹಾಸ್ಯ ಮಾಡಬಹುದು. "ನಾರದ"ನ ಭಕ್ತಿಭೂಮಿಕೆಯನ್ನು ಕೆಡಿಸಿ, ಜಗಳಗಂಟನೆಂಬ ಹೊಸ ಹೊದಿಕೆಯನ್ನು ಹೊದಿಸಿ, ಅವನ ಅಳುವಿನ ಕಾಲದಲ್ಲಿ, ಅದು ಹಿಂದಿನ ತಪ್ಪಿಗೆ ದೊರೆತ ಶಿಕ್ಷೆಯೆಂದು ಸಮಾಧಾನಕೊಡುವ ಪೌರಾಣಿಕರಷ್ಟು ಉದ್ಧಟವೃತ್ತಿಯನ್ನು ಈ ನಾಟಕವೇ ತೋರುವುದಿಲ್ಲ. "ದೇವಾ, ನೀನು ಕೃಷ್ಣಲೀಲೆಯನ್ನು ತೋರಿದ ಕಾಲದಲ್ಲಿ ನಿನ್ನನ್ನು ಅವಮಾನಿಸಿದೆನೆಂದು ಈ ಕೋಪವೇ"—ಎಂಬ ಮಾತಿನ ವ್ಯಂಗ್ಯಟೀಕೆಯಾದರೂ ಇದೇ.

ಮುನ್ನುಡಿಯೆಂದು ಇನ್ನು ಹೆಚ್ಚು ಮಾತು ಬೆಳೆಯಿಸುವ ಅವಶ್ಯವಿಲ್ಲ. ಇದೊಂದು ವ್ಯಂಗ್ಯ ನಾಟಕವೆಂದು ತಿಳಿದು ಓದಿದಲ್ಲಿ ಇದರ ಯೋಗ್ಯತೆ ಉದ್ದೇಶಗಳು ಸ್ಪಷ್ಟವಾದೀತೇ ವಿನಹ, ಪೌರಾಣಿಕ ಕಣ್ಣಿಂದ ಕಂಡರೆ ನಾನೇನೋ ಅಪರಾಧಿಯಾಗಿ ಕಾಣಿಸಬಹುದು. ಅಂತು ಕೆಲವೊಂದು ಹಳೆ ಪೌರಾಣಿಕರಷ್ಟು ಅಪರಾಧ ನನ್ನಿಂದಾಗಿಲ್ಲವೆಂಬೊಂದು ಸಮಾಧಾನ ನನಗಿದೆ.

ಇತಿ,

ತಾ. 20-2-1932,
ಮಂಗಳೂರು.

**ಶಿವರಾಮ ಕಾರಂತ.**

# ಪಾತ್ರವರ್ಗ.

| | |
|---|---|
| ನಾರದ — | ಭೂಲೋಕದಲ್ಲಿ ಅವತರಿಸುವ ದೇವಮುನಿಯು. |
| ವಾಮನರಾವ್— | ಭೂಲೋಕದ ಒಬ್ಬ ಸಭ್ಯಗೃಹಸ್ಥ. |
| ಭೋಜರಾವ್— | ಇನ್ನೊಬ್ಬ ಸಭ್ಯಗೃಹಸ್ಥ. |
| ಕೃಷ್ಣರಾವ್— | ಕಲಿಯುಗದ ನಾರದನೆನಿಸಿಕೊಂಡವನು. |
| ಮದನರಾವ್— | ಭೂಲೋಕದ ಒಬ್ಬ ಕೀರ್ತಿಶಾಲಿ. |
| ಹರಿಶ್ಚಂದ್ರರಾವ್— | ನಾಟಕಮಂಡಲವೊಂದರ ಯಜಮಾನನು. |
| ಸಾಬಜಾನ್— | ಭೂಲೋಕದ ಒಬ್ಬ ರಸಿಕ. |
| ನರ್ಮದಾ— | ಮದನರಾಯರ ಪತ್ನಿ. ಪತಿವ್ರತೆಯೆಂದು ಕೀರ್ತಿಶಾಲಿನಿಯಾದವಳು. |
| ಚಮೇಲಿ— | ದೇವದಾಸಿ. |

# ನಾರದ ಗರ್ವಭಂಗ

## ಮೊದಲನೇ ದೃಶ್ಯ.

(ಕಲಿಯುಗ. ಭರತಖಂಡ. ೧೯೩. . . ನೇ ಇಸವಿ. ಒಂದು ನಗರದ ಒಂದು ಬೀದಿಯಲ್ಲಿ ವಾಮನರಾಯ ಕೃಷ್ಣರಾಯರು ಮಾತನಾಡುತ್ತ ನಿಂತಿರುವರು. ಆಕಸ್ಮಿಕವಾಗಿ ಮನಸ್ತಾಪದ ಗಾಳಿ ಅವರ ನಡುವೆ ಬೀಸುವುದು.)

**ವಾಮನ:**—ಕೃಷ್ಣರಾವ್, ನಿನ್ನನ್ನು ನಂಬಿದವರ ಗತಿಯೆಲ್ಲ ಹೀಗೆಯೇ ಸರಿ. ಅಲ್ಲವಾದರೆ ನಿನ್ನೆ ನೀನು ಅಂದುದೇನು? ಈ ಹೊತ್ತು ಆನ್ನುವದೇನು? ನಿನ್ನೆ ದಿನ ನೀನು ಹೇಳಲಿಲ್ಲವೆ: ನನಗೆ ಹೇಗಾದರೂ ಮಾಡಿ ಭೋಜರಾಯರಿಂದ ೧೦೦ ರೂಪಾಯಿಗಳನ್ನು ತೆಗೆಯಿಸಿಕೊಡುವೆನೆಂದು?

**ಕೃಷ್ಣ:**—ಅಹುದು, ಹೇಳಿದುದು ನಿಜ. ಹಾಗೆ ಕೊಡಿಸುವುದಕ್ಕೂ ಅಡ್ಡಿಯಿರಲಿಲ್ಲ. ಆದರೆ ಅಂತರಂಗದಲ್ಲಿ ನಿನ್ನ ಮೇಲೆ ಅವನಿಗೆ ಅಷ್ಟು ವೈರವಿದೆ ಎಂದು ಯಾರಿಗೆ ಗೊತ್ತು? ನಾನೇನೊ ಹೋದೊಡನೆಯೇ ಕೇಳಿದೆ. "ಹಣ ಯಾರಿಗೆ"—ಎಂದು ಕೇಳಿದನು. ನಾನು "ನನಗೆ"—ಎಂದೆ. "ಸುಳ್ಳು"—ಎಂದನು ಆವನು. ನನ್ನ ಮಾತನ್ನು ಅವನು ನಂಬಲಿಲ್ಲ. ನಿನ್ನ ಹೆಸರನ್ನಾಗ ಹೇಳಿದೆ. ಒಮ್ಮೆಗೇ ಅವನು ಕಿಡಿಕಿಡಿಯಾದನು. "ಆ ಚಂಡಾಲನಿಗಾದರೆ ಒಂದು ಬಿಡುಕಾಸನ್ನೂ ಕೊಡಲಾರೆ. ಅವನನ್ನು

ನೋಡು, ನೀರಿಲ್ಲದಲ್ಲಿ ಕುತ್ತಿಗೆಯ ತನಕ ಹುಗಿಯುಬೇಕು"
ಎಂದನು.

**ವಾಮನ:**— ನಿಜವೇ? ಅವನ ಹಣವಿಲ್ಲದಿದ್ದರೆ ಅಷ್ಟೆ ಹೋಯಿತು. ಅವನಾಡಿದ ಮಾತುಗಳು ನಿಜವೆ? ಹೊರಗಿನಿಂದ ನನ್ನ ಭಾರಿ ಸ್ನೇಹಿತನ ಹಾಗೆ ನಟಿಸುತ್ತಾನೆ.

**ಕೃಷ್ಣ:**— ಅವನ ವಿಚಾರ ನಿನಗೆ ತಿಳಿಯದೇ? ಅವನಿಗೆ ಎರಡು ನಾಲಗೆ; ಎರಡು ಎದೆ. ಅವನು ಹೇಳಿದ್ದನ್ನೆಲ್ಲಾ ನಿನಗೆ ತಿಳಿಸಿದರೆ ಅವನ ಪ್ರಾಣವನ್ನೇ ತೆಗೆದುಬಿಟ್ಟೇಯೆ . . .

**ವಾಮನ:**— ಬೇರೇನು ಹೇಳಿದನು, ಹೇಳು. ಹೇಳು . . . ಹೇಳು ನೀನು. ಏನೂ ದಾಕ್ಷಿಣ್ಯ ಬೇಡ.

**ಕೃಷ್ಣ:**— ಬೇಡ ಮಹಾರಾಯ, ನನಗೇಕೆ ಇಲ್ಲದ ಜಗಳ. ಮಜ್ಜಿಗೆಗೆ ಹೋದವನು ಎಮ್ಮೆ ಕ್ರಯ ಕೇಳಿದನಂತೆ.

**ವಾಮನ:**— ನೀನೆನ್ನದಿದ್ದರೆ ನನ್ನಾಣೆಯಿದೆ.

**ಕೃಷ್ಣ:**— ಏಕೆ ಹೀಗೆ ಹಟಮಾಡುವೆ? ಹೇಳುವುದಕ್ಕೂ ಅಲ್ಲ, ಹೇಳದೆ ಇರುವುದಕ್ಕೂ ಅಲ್ಲ . . . ನೋಡು . . . ನಿನ್ನ ಹೆಂಡತಿ ತವರುಮನೆಗೆ ಹೋಗಿರುವಳಷ್ಟೆ. ಅದರ ಕಾರಣವೇ ಬೇರೆ ಇದೆಯಂತೆ. ಅವಳ ನಡತೆ ನಿನಗೆ ಸರಿಕಾಣಲಿಲ್ಲವಂತೆ.

**ವಾಮನ:**— ಅವಳ ನಡತೆ ನನಗೆ ಸರಿಕಾಣಲಿಲ್ಲವಂತೆ!

**ಕೃಷ್ಣ:**— ಅಲ್ಲ, ಅವಸರದಲ್ಲಿ ಹೇಳಿದೆ. ನಿನ್ನ ನಡತೆ ಅವಳಿಗೆ . . . ಕಾಣಲಿಲ್ಲವಂತೆ. ನೀನು ಚಮೇಲಿ ಮನೆಗೆ ಹೋಗುತ್ತಿಯೆಂದು ತಿಳಿದುಬಂದುದರಿಂದ ಅವಳು ನಿನ್ನ ಮೇಲೆ ಸಿಟ್ಟಾಗಿ ಹೋದುದಂತೆ.

**ವಾಮನ:**— ನಿಜವೇ ಅವನು ಹೀಗೆಂದುದು?

**ಕೃಷ್ಣ:**— ನಿನ್ನಾಣೆಗೂ.

**ವಾಮನ:**— ಅವನು ಬರಲಿ.

**ಕೃಷ್ಣ:**— ಆದರೆ ನನ್ನ ಹೆಸರನ್ನು ಮಾತ್ರ ಹೇಳಬೇಡ.

**ವಾಮನ:**— ಊಹೂಂ. (ಅಷ್ಟರಲ್ಲಿ ಭೋಜರಾಯನು ಅವರ ಕಡೆಗೇ ಬರುವನು.) ಅವನೇ ಬಂದನು. ಅವನು ಝಾಡಿಸಿ ಕೊಡವಿ ಬಿಡುತ್ತೇನೆ.

**ಕೃಷ್ಣ:**— ಇಲ್ಲಿ ನಡುಹಾದಿಯಲ್ಲಿ ಬೇಡ. ಮನೆಯಲ್ಲಿ ಕೇಳಿದರಾಯಿತು.

**ಭೋಜ:**— ಹೋ ಕೃಷ್ಣರಾವ್, ಏನು ನಿಂತುಬಿಟ್ಟಿರಿ? ಜತೆಯಲ್ಲಿ ವಾಮನರಾಯನೂ ಇದ್ದಾನೆ. ವಾಮನರಾವ್, ನಿಮ್ಮ ನಾಲಗೆ ನೆಲಡ ತನಕ ಬೆಳೆದ ಹಾಗಿದೆ. ನೀವು ಹಿಂದಿನಿಂದ, ನನ್ನ ವಿಷಯದಲ್ಲಿ ಏನೇನೋ ಅನ್ನುತ್ತಿದ್ದಿರಂತೆ. ನಾನು ಚಮೇಲಿ ಮನೆಗೆ ಹೋದುದನ್ನು ನೀವು ಕಂಡಿರುವಿರಾ?

**ವಾಮನ:**— ಭೋಜರಾವ್, ತಲೆಸರಿಯಿಲ್ಲದೆ ಮಾತನಾಡಬೇಡಿರಿ. ನೀವು ಚಮೇಲಿ ಮನೆಗೆ ಹೋದಿರೆಂದು ನಾನು ಹೇಳಿದೆನೇ? ನಾನು ಹೋದೆನೆಂದು ನೀವು ಹೇಳಿದಿರಾ? ನಿಜಕ್ಕೂ ನೋಡಿ— ನೀವು ಯಾರುಯಾರ ಮುಂದೆ ಆ ರೀತಿ ಹೇಳಿದರೆ ನಿಮ್ಮ ಸೊಂಟವನ್ನು ಒಂದಕ್ಕೆರಡು — ಎರಡಕ್ಕೆ ನಾಲ್ಕು — ನಾಲ್ಕಕ್ಕೆ ಎಂಟು ಮಾಡುತ್ತೇನೆ ತಿಳಿಯಿತೇ?

**ಕೃಷ್ಣ:**— ಛೆ, ಛೇ . . . ಸ್ನೇಹಿತರು ನೀವು, ಹಾದಿಯಲ್ಲಿ ಹೀಗೆ ಜಗಳಾಡುವುದೇ? ಮೇಲೆ ನೆರಳು ಸಹ ಇಲ್ಲ.

**ಭೋಜ:**— ನೀನು ಬಿಡು ಕೃಷ್ಣ, ಇವನ ಕೀಲನ್ನು ಮುರಿಯದಿದ್ದರೆ ನಾನೇಕೆ? ಇಲ್ಲಿಲ್ಲ . . . ನನಗಿದು ಇಲ್ಲಿಯೇ ನಿಶ್ಚಯವಾಗಬೇಕು. ಖಂಡು ತುಂಡಾಗಬೇಕು.

**ವಾಮನ**:–ಛೇ. ನೀವು ಗೆಳೆಯರು ಹೀಗೆ ಜಗಳಾಡುವುದನ್ನು ನಾನು ಕಾಣಲಾರೆ. ಬೇಡ, ಸುಮ್ಮನಿರಿ . . . ಎಲ್ಲಾ ಮರೆತು ಬಿಡಿ.

**ಭೋಜ**:–ಕೃಷ್ಣರಾವ್, ಮಾನದ ಮೇಲೆ ಅಪವಾದ ತರುವ ಈ ಚಂಡಾಲನನ್ನು ಕಂಡು ಸುಮ್ಮನಿರಬೇಕೆ?

**ವಾಮನ**:—ನಾನು ಹಾಗೆ ಅಪವಾದ ಹೊರಿಸಿದವನೋ ನೀವೋ? ಕೃಷ್ಣರಾವ್ ನೀವು ಹೇಳಿರಿ. ಎಲ್ಲವೂ ಇಲ್ಲಿ ಮುಖಮುಖ ಆಗಿ ಹೋಗಲಿ.

(ನಾರದ ಮಹಾಮುನಿಯು ಸ್ವರ್ಗಲೋಕದಿಂದ ಭೂಲೋಕಕ್ಕೆ ಈಗಷ್ಟೆ ಅವತರಿಸಿ ಬರುತ್ತಿರುವನು. ಕೈಯಲ್ಲಿ ತಾಳತಂಬುರಿಯಿದೆ. ಸುಮನೋಹರ ರೂಪು.)

**ನಾರದ**:—ಶ್ರೀ ವಿಷ್ಣುವಿನ ಅನುಜ್ಞೆಯಂತೆ ಭೂಲೋಕದಲ್ಲಿ ಅವತರಿಸಿದ್ದಾಯಿತು. ಪತಿವ್ರತಾ ನರ್ಮದೆಯ ದರುಶನವೆಂದಿಗೆ ಆದೀತೆಂದು ನನ್ನ ಮನವು ಕಾತರಗೊಳ್ಳುತ್ತಲಿದೆ. ನರ್ಮದೆಯಂಥ ಪತಿವ್ರತೆಯರಿಲ್ಲೆಂದು ಸುರಲೋಕಕ್ಕೆ ವದಂತಿ ಬಂದಿದೆಯಲ್ಲ. ಅದನ್ನೇ ನಿಷ್ಕರ್ಷಿಸಲು ಬಂದ ಹಾಗಾಯಿತು. ಆದರೆ ಇಷ್ಟು ಹಾದಿ ಸಾಗಿದರೂ ಭರತಖಂಡದ ಗುರುತೇ ಹತ್ತದಾಗಿದೆ. ಆರ್ಯರ ನಡೆನುಡಿಗಳು ವಿಚಿತ್ರವೆನಿಸುತ್ತವೆ. ಈಗ ಯಾರೊಡನೆ ಮದನರಾಯರ ಮನೆಯನ್ನು ವಿಚಾರಿಸಲಿ? (ಮುಂದರಿದು ಜಗಳಾಡುತ್ತಿರುವ ಮೂವರ ಕೂಟವನ್ನು ಕಂಡು) ಹಾ, ಇಲ್ಲಿ ನರಲೋಕದ ಮಾನವತ್ರಯರು ನಿಂತಿರುವರು. ಅವರನ್ನೇ ವಿಚಾರಿಸಲೇ? ಛೇ, ದೇವಮುನಿಯಾದ ನಾನೇ ಅವರನ್ನು ಮೈಮುಟ್ಟಿ ಮಾತನಾಡಿಸುವುದೆಂದರೇನು? ಇಲ್ಲಿಯೇ ನಿಂತಿರುವೆನು. ಅವರು ನನ್ನನ್ನು ತಾವಾಗಿ ಮಾತ

ನಾಡಿಸದಿದ್ದರೆ, ನನ್ನ ದಿವ್ಯಗಾನದಿಂದಲಾದರೂ ಅವರ ಮನಸ್ಸನ್ನು ಆಕರ್ಷಿಸಿ ನನ್ನ ಆಗಮನ ವಾರ್ತೆಯನ್ನು ಸೂಚಿಸುವೆನು.

**ಕೃಷ್ಣ:**—ನಿಮ್ಮ ತಂಟೆಯೇ ನನಗೆ ಬೇಡ. (ತೆರಳುವನು.)

**ವಾಮನ:**—ನಾನು ಹಾಗೆಂದೆನೆಂದು ಯಾರು ನಿಮಗೆ ಹೇಳಿದರು?

**ಭೋಜ:**—ನಾನು ಹಾಗೆಂದೆನೆಂದು ನಿಮಗೆ ಯಾರು ಹೇಳಿದರು?

**ವಾಮನ:**—ಯಾರೇ, ತಿಳಿಯದವರಂತೆ ಮಾತನಾಡುತ್ತೀರಿ. ಈಗಷ್ಟೆ ಹೋದ ಕೃಷ್ಣರಾಯ.

**ಭೋಜ:**—ಕೃಷ್ಣರಾಯನೇ, ನಿಜವೇ? ನಿಮ್ಮ ವಿಷಯವನ್ನು ಅವನೇ ಹೇಳಿದುದು.

**ವಾಮನ:**—ಹಾಗಾದರೆ ಇದು ಅವನದೇ ತಂತ್ರ. ಅದಕ್ಕೇ ಅವನು ಪಲಾಯನ ಮಾಡಿದುದು.

**ಭೋಜ:**—ಅವನು ನನ್ನಿಂದ ನೂರು ರೂಪಾಯಿಗಳನ್ನು ಒಯ್ದು...

**ವಾಮನ:**—ನನಗೆಂದು ಹೇಳಿದನೇನು?

**ಭೋಜ:**—ಯಾರ ಸುದ್ದಿಯನ್ನೂ ಅವನು ತೆಗೆಯಲಿಲ್ಲ.

**ವಾಮನ:**—ಅರೆ, ಠಕ್ಕನೆ! ಅವನನ್ನು ಕರೆಯಿರಿ. ಲೇ, ಲೇ ನಾರದ . . . ಲೇ ನಾರದ . . .

**ಭೋಜ:**—ಅವನು ಅಂಥ ಠಕ್ಕನೆಂದು ತಿಳಿದಿದ್ದರೆ ನಾನು ಹಣವನ್ನು ಕೊಡುತ್ತಿರಲಿಲ್ಲ. ಅವನನ್ನು ಎಳೆದು ತಾರದಿದ್ದರೆ ನಾನೇಕೆ? ಲೇ ನಾರದ, ಲೇ ನಾರದ . . . .

(ಎಂದು ಕೂಗುತ್ತ ಓಡುವನು.)

**ನಾರದ:**—(ಆ) ಹಾ! ಇವರಿಗೆ ನನ್ನ ಆಗಮನವು ತಿಳಿಯಿತೆಂದು ಕಾಣುವುದು. ನನ್ನನ್ನೇ ಕರೆಯುತ್ತಿರುವರು. ಆದರೆ «ಲೇ» ಎಂದು ಏಕವಚನದಿಂದ ಅವಮಾನಿಸಿ ಕರೆದರೆ ನಾನು ಹೋಗ

ಬಹುದೇ? "ಭೋ ಸ್ವಾಮಿನ್" ಅನ್ನಲು ಏನು ಸಂಕಟ? ಇರಲಿ, ಇವನು ನನ್ನನ್ನು ಗೌರವಿಸಲು ಶ್ರೀ ವಿಷ್ಣುವಿನ ಲೋಕ ದಿಂದ ಬಂದವನೆಂದು ತಿಳಿಯಬೇಕು. ಅದಕ್ಕಾಗಿ ಶ್ರೀ ಹರಿಯ ಗುಣಗಾನವನ್ನಾದರೂ ಮಾಡುವೆನು. (ಹಾಡುವನು.)

(ಭೋಜನು ಕೃಷ್ಣರಾಯನನ್ನು ಎಳೆದು ತಂದು)

**ಭೋಜ:**— ಲೇ ನಾರದಾ . . . ಹೀಗೆ ಚಾಡಿ ಹೇಳಿ ಒಬ್ಬರಿಂದೊಬ್ಬ ರಿಗೆ ಜಗಳ ಹಿಡಿಸಿ ಹಾಕುತ್ತೀಯಾ?

**ಕೃಷ್ಣ:**— ನಾನು ನಿಮ್ಮಾಣೆಯಾಗಿಯೂ ಹಾಗೆ ಹೇಳಿಲ್ಲ ಸ್ವಾಮಿ.

**ವಾಮನ:**— ಹೇಳಲಿಲ್ಲವೇ? ಏ ಠಕ್ಕುಳಿ. ನಿನ್ನ ನಾರದನ ಕೆಲಸಕ್ಕೆ ತಕ್ಕ ದಂಡನೆ ಕೊಡಲೇಬೇಕು. ಏ ನಾರದಾ

(ಅವನನ್ನು ಹೊಡೆಯುವನು.)

**ಕೃಷ್ಣ:**— ಅಯ್ಯೋ, ನಾನು ನಾರದನಲ್ಲ. ದಮ್ಮಯ್ಯ ಬಿಡಿರಿ . . .

**ನಾರದ:**— ಇವರೇನು, ಅವನನ್ನು ನಾರದನೆಂದು ತಿಳಿದರೆ? ಇನ್ನು ನಿಂತಿರಲಾಗದು. ಆ ಪ್ರಾಣಿಯ ಹಿಂಸೆಯಾಗುತ್ತಿರುವುದನ್ನು ಕಂಡು. (ಮುಂದರಿಸಿ) ಸ್ವಾಮಿ, ಶಾಂತಿಃ ಶಾಂತಿಃ ಶಾಂತಿ.

**ಕೃಷ್ಣ:**— ಅಯ್ಯೋ ನನ್ನನ್ನು ಕೊಲ್ಲುತ್ತಾರೆ . . . ಬನ್ನಿ ಬಿಡಿಸಿ . . . ಬಿಡಿಸಿ ಸ್ವಾಮಿ.

**ಭೋಜ:**— ನಿನ್ನ ಕಲಿಯುಗದ ನಾರದನ ಕೆಲಸಕ್ಕೆ ರಾಜಿಕೊಟ್ಟೆ ನೆಂದು ಬೊಗಳಿದ ಹೊರತು ಬಿಡುವಂತಿಲ್ಲ.

**ನಾರದ:**— ಹಾ. ಈ ಮನುಷ್ಯನು ನನ್ನನ್ನೆಲ್ಲಿಯೋ ಕಂಡು ನಾರ ದನು ಬಂದಿರಬೇಕೆಂದು ಹೇಳಿರಬಹುದೇ? ಇಲ್ಲವೆ ತಾನೇ ನಾರದನೆಂದಿರಬಹುದೇ? (ಅವರ ಬಳಿಗೆ ಹೋಗಿ ತಡೆದು) ಮಾನ ವರೇ, ಶಾಂತಿಃ ಶಾಂತಿಃ ಶಾಂತಿಃ.

**ಭೋಜ:**— ಸುಮ್ಮನಿರಯ್ಯ. ನಿನ್ನದೇನು ಗಲಭೆ? ಶಾಂತಿಃ ಶಾಂತಿ ಯಂತೆ. ನಿನ್ನ ಅಜ್ಜನ ಶಾಂತಿಯೋ . . . ಮುತ್ತಜ್ಜನದೊ . . . ಪಿಜ್ಜನದೋ . . . .

**ನಾರದ:**— ನನ್ನ ಅಜ್ಜನ ಶಾಂತಿಯೇ? ಅಂದರೆ ನನ್ನ ಪಿತನ ಪಿತನಾದ ಮಹಾವಿಷ್ಣುವಿನ ಶಾಂತಿಯಾದಂತಾಯಿತು. ಇವರೆನ್ನುವರೇನು? ಸ್ವಾಮಿ, ಈ ಮನುಷ್ಯನನ್ನು ಏಕೆ ಹಿಂಸಿಸುವಿರಿ?

**ವಾಮನ:**— ಹೋಗಯ್ಯ, ನಿನಗೇಕೆ ತಲೆಹರಟೆ? ಈ ನಾರದನ ಗುಟ್ಟೇನು ಗೊತ್ತು ನಿನಗೆ? ನೀನೇಕೆ ಬಂದೆ? ಇದೇನು ಮೊಹರಮ್ ಸಮಯವೇ!

**ನಾರದ:**— ಮೊಹರಮ್ ಎಂದರೆ! ಸ್ವಾಮಿ ನಾನು ನಾರದನು, ಅವನಲ್ಲ.

(ಈ ಮಾತಿನಿಂದ ಆಕರ್ಷಿತರಾಗಿ ವಾಮನ ಭೋಜರಿಬ್ಬರು ನಾರದನನ್ನೆ ನೋಡಲು ಕೃಷ್ಣನು ತಿರುಗೊಮ್ಮೆ ಓಡಿಹೋಗುವನು.)

**ಭೋಜ:**— ನೀನು ನಾರದನೆ? ಹ್ಹ . . . ಹ್ಹ . . . ಹ್ಹ . . . ಹ್ಹ . . .

**ವಾಮನ:**— ನೀನು ನಾರದನೇ ಹ್ಹ . . . ಹ್ಹ . . . ಅರೆ ಭೋಜರಾವ್, ಕೃಷ್ಣರಾಯನು ತಪ್ಪಿಬಿಟ್ಟನಲ್ಲ!

**ಭೋಜ:**— ಏ ಪಾಪಿ, ನಿನ್ನ ಮಾತನ್ನು ಕೇಳಿ ಅವನನ್ನು ಬಿಟ್ಟೆನಲ್ಲ . . ನೀನೆಲ್ಲಿಂದ ಬಂದೆಯೋ ಹಗಲುವೇಷ.

**ನಾರದ:**— ಭೋ ಮಾನವಾ;

**ವಾಮನ:**— ಭೋ ಮಾನವ! ನಾನು ಮಾನವ ಅಲ್ಲ. ನನ್ನ ಹೆಸರು ವಾಮನ. ವಾಮನರಾಯ ನಾನು. ಮೇಲುಮನೆ ವಾಮನರಾಯ ನಾನು. ಕೆಳಮನೆ ಭೋಜರಾಯರೆಂತ ಇವರು. ನಿನಗೇಕೆ ಬೇಕಿತ್ತು ನಮ್ಮ ವಿಚಾರ?

**ನಾರದ:**— ನನ್ನ ನರಲೋಕದ ಪ್ರಜೆಗಳೇ!

**ಭೋಜ:**— ನರವಿಲ್ಲದ ಪ್ರಜೆಗಳು ಯಾರೂ ಇಲ್ಲ.

**ವಾಮನ:**— ಸುಮ್ಮನಿರಯ್ಯ, ಭಾಷಣಮಾಡುವ ಹಾಗೆ ಕಾಣುತ್ತದೆ.

**ನಾರದ:**— ನನ್ನ ನರಲೋಕದ ಪ್ರಜೆಗಳೇ. ನಾನು ನಿಮ್ಮೆಲ್ಲರ ಸುಖದುಃಖ ವಿಚಾರಣೆಗಾಗಿ ಬಂದಿರುವೆನು.

**ವಾಮನ:**— ಏನು ಕೋರ್ಟುಕಛೇರಿ ಇಡಿಸುತ್ತಿಯಾ ವಿಚಾರಣೆಗೆ?

**ನಾರದ:**— ನಾನು ಈಗಷ್ಟೆ ಶ್ರೀ ವಿಷ್ಣುವಿನಿಂದ ಅನುಗ್ರುಹಿತನಾಗಿ ಬಂದವನು.

**ಭೋಜ:**— ಯಾವ ಗಾಡಿಗೆ? ರೈಲಿನಲ್ಲಿ ಬಂದೆಯೋ ಮೋಟಾರಿನಲ್ಲೊ . . . . .

**ನಾರದ:**— ಇಲ್ಲಿ ಮದನರಾಯನ ಮನೆಯೆಲ್ಲಿ?

**ಭೋಜ:**— ನಾರದನಂತೆ! ಮದನರಾಯನ ಮನೆ ಬೇಕಂತೆ. ಹ್ಹ ಹ್ಹ ಲೋ, ನಾಟಕ ಕಂಪೆನಿಯಿಂದ ತಪ್ಪಿಸಿಕೊಂಡು ಬಂದೆಯೇನು? ಬೀದಿಯ ಮೇಲೂ ಬೇರೆ ಉಡುಗೆ ಹಾಕಬಾರದೇ? ನಿನ್ನ ಕಾಪಿಯೋ! ತಂಬೂರಿಯೋ! ತಂಬೂರಿ ಬುರಡೆಯೋ! ತಲೆಬುರುಡೆಯೋ! ದೊಂಬಿದಾಸನ ಹಾಗೆ ಇದ್ದೀಯಾ!

**ನಾರದ:**— ಆಹಾ. ನನ್ನ ಭೂಲೋಕದ ಜನರಿಗೆ ನನ್ನ ಗುರುತೇ ಹತ್ತದಲ್ಲ. ಏನುಮಾಡಲಿ. ನನ್ನ ದಿವ್ಯ ಗಾನವನ್ನಾದರೂ ಮಾಡಲೇ?

**ಭೋಜ:**— ಏನು, ಸಂಗೀತದ ಬೈಠಕು ಆಗುತ್ತದೆಯೋ ಆಗಲಿ . . ನಾಟಕಿ ಮನುಷ್ಯ.

**ವಾಮನ:**— ಸುಮ್ಮನಿರಿ ಸ್ವಾಮಿ, ಕೇಳುವ ಇಷ್ಟು ಸಂಗೀತವನ್ನು. ಅಗ್ಗದಲ್ಲಿ ಸಿಗುವುದಾದರೆ ಯಾರಿಗೆ ಬೇಡ?

**ನಾರದ:** (ತಲ್ಲೀನತೆಯಿಂದ ಹಾಡುವನು.)

**ಭೋಜ:**— ಛೇ, ಛೇ. ಸಂಗೀತವೆಂದರೆ ಸಂಗೀತ. ಕರುಳನ್ನು ಚೂರಿಯಿಂದ ಇರಿದಷ್ಟು ಸಂತೋಷವಾಗುತ್ತದೆ.

**ವಾಮನ:**— ಇವನ ಕಂಠ ಮಾತ್ರ ದಿವ್ಯವಾಗಿದೆ. ಕೋಗಿಲೆ ಮರಿ. ಪ್ರಾಯಶಃ ಇದು ನಾಟಕ ಕಂಪೆನಿಯ ಪ್ರಾಣಿಯೇ ಇರಬೇಕು. ಈಗೇನೋ ಉಪ್ಪರಿಗೆ ದುರಸ್ತಿಯಿಲ್ಲದೆ . . . ಅಲ್ಲದಿದ್ದರೆ ಇಷ್ಟು ಚೆನ್ನಾಗಿ ಹಾಡಲು ಬರುತಿರಲಿಲ್ಲ.

**ಭೋಜ:**— ಪಾಪ! ಯಾರಾರ ಅವಸ್ಥೆ ಹೇಗೋ . . . ಎಲ್ಲಿ, ಕಂಪೆನಿಯವರು ಸಂಬಳ ಕೊಡದೆ ಹುಚ್ಚು ಹಿಡಿಯಿತೋ ಏನೋ. ಹೋಗಲಿ, ಒಂದು ಎರಡಾಣೆ ಕಾಸನ್ನು ಕೊಟ್ಟು ಬಿಡುವ. ಚಾ ಕುಡಿದುಕೊಳ್ಳಲಿ. ಚಾ ತಲೆಗೆ ಹಿಡಿಯುತ್ತದೋ ಇಲ್ಲವೋ . .

(ಎಂದು ಎರಡಾಣೆಯನ್ನು ಕೊಡಲು ಮುಂದರಿಯುವನು.)

**ನಾರದ:**— ಮಾನವರೇ,

**ವಾಮನ:**—ಒಂದೂ ವಾನುನರಾಯರೇ ಅನ್ನು, ಇಲ್ಲವೆ ಮಾವನವರೇ ಅನ್ನು. ಮಾನವರೇ ಅಂದರೆ ಯಾರಾದರೂ ಹೊಡೆಯಬಹುದು. ಇದೋ, ಇನ್ನೊಂದಾಣೆ ಕಾಸು. ಬಿಸಿಬಿಸಿ ಅಂಬೊಡೆ ತೆಗೆದುಕೋ.

**ನಾರದ:**— ಗೆಳೆಯರೇ, ನಾನು ಹಣಕ್ಕಾಗಿ ಬಂದವನಲ್ಲ. ನಾನು ಸಕಲವನ್ನು ತ್ಯಜಿಸಿದ ಸನ್ಯಾಸಿಯು. ಧನವೇ ಮನುಷ್ಯನನ್ನು ನರಕಕ್ಕೆ ಎಳೆಯುವ ಸಾಧನವು.

(ಧನದ ಕೆಡುಕನ್ನು ಕುರಿತು ಹಾಡುವನು.)

**ವಾಮನ:**— ಛೇ, ಛೇ . . . ಕಂಠವೆಂದರೆ ಬಾಲಗಂಧರ್ವನ ಕಂಠದ ಹಾಗೆ ಇದೆ. ನಿಜಕ್ಕೂ ಈ ಪ್ರಾಣಿ ಎಲ್ಲಾದರೂ ನಾಟಕ

ಕಂಪೆನಿಗೆ ಸೇರಿದರೆ ತಿಂಗಳಿಗೆ ೧೦೦ ರೂಪಾಯಿಗಳಿಗಡ್ಡಿಯಿಲ್ಲ.

**ಭೋಜ:**— ನೂರು ರೂಪಾಯಿಯೋ! ಆ ಸುಬ್ಬು ವೆಂಕಟರಾಯ ನಾದರೆ ಇನ್ನೂರು ರೂಪಾಯಿ ಬಡಿದುಕೊಂಡು ಕೊಟ್ಟಾನು. ಹೂಂ . . . ಹೊತ್ತಾಯಿತು ಹೋಗುವ.

(ಅವಸರದಿಂದ ಹೊರಡುವರು.)

**ನಾರದ:**— ಮಿತ್ರರೇ, ಮದನರಾಯರ ಮನೆಯೆಲ್ಲಿ?

**ವಾಮನ:**— ಅದೇಕೋ ನಿನಗೆ? ಒದ್ದು ಹೊರಗೆಹಾಕಿಯಾರು.

(ತೆರಳುವರು.)

**ನಾರದ:**— ಅರೆ, ಇವರೇನು ಹೇಳುತ್ತಿರುವರು? ಮದನರಾಯರು ಲೋಕಪ್ರಸಿದ್ಧರಂತೆ. ಅವರ ಮೇಲೆ ಮಿಥ್ಯಾಪವಾದವನ್ನು ಹೊರಿಸುವರಲ್ಲ. ಈಗ ಇನ್ನಾರನ್ನು ವಿಚಾರಿಸಲಿ. ಹರಿ ಹರಿ... ಎಂಥ ಕೆಲಸವನ್ನು ಕೊಟ್ಟೆ. (ಹಾಡುತ್ತ ನಿಂತಿರುವನು.)

(ಸಾಬಜಾನ ಸಾಹೇಬನು ಬಂದು, ನಾರದನನ್ನು ಕಂಡು ಆಶ್ಚರ್ಯ ದಿಂದ ಅವನ ಹಾಡನ್ನು ಕೇಳುತ್ತಿರುವನು.)

**ಸಾಬ:**— ವ್ಹಾ. ಇದೇನು ಅವತಾರ. ಚೆನ್ನಾಗಿ ಹಾಡುವನು . . . ಲೋ ನೀನಾರು?

**ನಾರದ:**— ನಾನು ನಾರದಮುನಿಯು.

**ಸಾಬ:**— ನಾಡರ್‌ಮುನಿ . . ಏನು ಹಾಳಾದವನೋ . . . ಇರಲಿ, ಬೇರೇನಾದರೂ ಹಾಡು. ಆ ಹರುಕುಮುರುಕು ಹಾಡುಗಳು ಬೇಡ.

**ನಾರದ:**— ಈ ಮನುಷ್ಯನಿಗೆ ಬೇರೆ ಹಾಡುಗಳು ಬೇಕಂತೆ. ಶ್ರೀ ಹರಿಗೆ ಪ್ರಿಯವಾದ ಈ ಹಾಡನ್ನು ಹಾಡಲೇ? (ಹಾಡುವನು.)

**ಸಾಬ:**—(ಅರ್ಧ ಹಾಡಿ ಆಗುವಷ್ಟರಲ್ಲಿ) ಅದು ಬೇಡವಯ್ಯ, "ಮೌಲಾ ಬೋಲಾ" ಹಾಡು. 'ನನಾ ನಾಮುಜೇ, ಮೇರೆ . . . .' ಇದು ಬರುವುದಿಲ್ಲವೇನಯ್ಯ?

**ನಾರದ:**—ಅಂದರೆ,

**ಸಾಬ:**—ಅಂದರೆ ನೀನೆಲ್ಲಿಯೋ ನಾಲ್ಕು ಹಳೆಯ ಹಾಡು ಕಲಿತವನೆಂದು ಕಾಣುವುದು. ಇದೋ, ತೆಗೆದುಕೋ ಒಂದಾಣೆ. "ಮೌಲಾಬೋಲಾ" ಹಾಡಿದ್ದರೆ ಒಂದು ರೂಪಾಯಿ ಕೊಡುತ್ತಿದ್ದೆ.

**ನಾರದ:**—ನಾನು ಹಣಕ್ಕಾಗಿ ಬಂದವನಲ್ಲ.

**ಸಾಬ:**—ನಿನ್ನ ಅಹಂಕಾರ ಹಾಳಾಯಿತು . . . . . . . . ನಿನಗೆ ಹಣ ಬೇಡವಾದರೆ ಬೇಡ. ನನಗೇನು ಅದು ಕಹಿಯೆನಿಸುವುದಿಲ್ಲ.

(ಹಿಂದಿನವರು ಕೊಟ್ಟುಹೋದ ಕಾಸನ್ನೂ ಒಯ್ದು ನಡೆಯುವನು.)

**ನಾರದ:**—ಈ ಜನರ ರೀತಿಯೇ ವಿಚಿತ್ರವಾಗಿರುವುದು. ನಾನು ಬಂದು ಇಷ್ಟು ಹೊತ್ತಾದರೂ ನನ್ನನ್ನು ಗಮನಿಸುವವರೇ ಇಲ್ಲವಾಯಿತು. ಇನ್ನೇನು ಮಾಡಲಿ. ಶ್ರೀಮನ್ನಾರಾಯಣನು ನರ್ಮದೆಯ ಆದರ್ಶ ಚರಿತ್ರೆಯನ್ನು ತಿಳಿದುಕೊಂಡು ಬಾ ಎಂದಿರುವನಲ್ಲ . . . ಏನುಮಾಡಲಿ? ಯಾರನ್ನು ಕೇಳಲಿ?

(ಮದನರಾಯನು ಬರುವನು.)

**ನಾರದ:**—ಈ ಮನುಷ್ಯನಾದರೂ ನನ್ನನ್ನು ನೋಡುವನೇ.

(ತಿರುಗಿ ಹಾಡುತ್ತ ನಿಲ್ಲುವನು)

**ಮದನ:**—ಹಾ! ಬಲು ಮನೋಹರವಾದ ಗಾನ. ಈ ಮನುಷ್ಯನಾರು? ಅಯ್ಯಾ ನೀವಾರು? ಇದೇನು ಈ ವೇಷದಲ್ಲಿರುವಿರಿ?

**ನಾರದ:**— ಮಿತ್ರರೇ, ನಾನು ದೇವಮುನಿಯಾದ ನಾರದನು. ಇಲ್ಲಿಗೆ ಪರಮ ಪತಿವ್ರತೆಯರಾದ ನರ್ಮದಾ ದೇವಿಯವರ ದರ್ಶನಕ್ಕಾಗಿ ಬಂದಿರುವೆನು.

**ಮದನ:**—(ಆ) ಇವನು ನನ್ನ ಹೆಂಡತಿಯ ಹೆಸರನ್ನೇ ಹೇಳುತ್ತಿರುವ ನಲ್ಲ. ಪ್ರಾಯಶಃ ಅವಳು ಗಾನಪ್ರಿಯಳೆಂದು ಇವನಿಗೆ ಯಾರೋ ತಿಳಿಸಿರಬೇಕು.

**ನಾರದ:**— ಸ್ವಾಮಿ, ನರ್ಮದಾದೇವಿಯವರ ಪತಿಯಾದ ಮದನ ರಾಯರ ನಿಲಯವೆಲ್ಲಿ?

**ಮದನ:**–ಸ್ವಾಮಿ, ನಾನೇ ಆ ಮದನರಾಯನು. ನನ್ನ ಹೆಂಡತಿಯೇ ನರ್ಮದೆ. ಇರಲಿ, ನಿಮಗೆ ನಮ್ಮ ಹೆಸರು ಹೇಗೆ ತಿಳಿಯಿತು?

**ನಾರದ:**— ಹಾಗಾದರೆ ನಿಮಗೆ ನನ್ನ ಆಶೀರ್ವಾದಗಳು. ನಾರಾಯಣ. ನಾರಾಯಣ.

**ಮದನ:**— ಆಶೀರ್ವಾದಗಳು!

**ನಾರದ:**— ಸ್ವಾಮಿ, ಶ್ರೀಮನ್ನಾರಾಯಣನಿಂದ ಅನುಜ್ಞಿತನಾಗಿ ನಾನು ತಮ್ಮನ್ನು ಕಾಣಲು ಬಂದೆನು.

**ಮದನ:**—(ಆ) ಈ ಮನುಷ್ಯನು ಗಾನವಿಶಾರದನೆಂದು ತೋರಿದರೂ ಇವನಿಗೆ ತಲೆ ಮಾತ್ರ ಸರಿಯಿಲ್ಲವೆಂದು ಕಾಣುವುದು. (ಪ್ರ) ನಾರದರೇನು ನೀವು? ಇರಲಿ, ಈ ಮೊದಲು ಯಾವ ನಾಟಕ ಮಂಡಲದಲ್ಲಿದ್ದಿರಿ?

**ನಾರದ:**— ನಾಟಕ ಮಂಡಲವೇ? ಶ್ರೀ ವಿಷ್ಣುವಿನ ಲೀಲಾನಾಟಕಕ್ಕೆ ನಾನೇ ಸೂತ್ರಧಾರನಾಗಿದ್ದೆನು.

**ಮದನ:**— ಅದಾವ ಊರಿನ ಕಂಪೆನಿ ಸ್ವಾಮಿ? ತೀರ ಹೊಸದು!

**ನಾರದ:**— (ಶ್ರೀ ವಿಷ್ಣುವಿನ ಲೀಲಾನಾಟಕವನ್ನು ಕುರಿತು ಹಾಡುವನು.)

**ಮದನ:**— (ಆ) ಇವನ ಹಾಡನ್ನು ಕೇಳುವಾಗ ಮನಸ್ಸು ಉಕ್ಕುವುದು. ಮಾತನ್ನು ಕೇಳುವಾಗ ವ್ಯಥೆಯಾಗುವುದು. ಇರಲಿ, ವೈದ್ಯರನ್ನು ಕರೆಯಿಸಿ ಚಿಕಿತ್ಸೆಗೊಳಿಸಿದರೆ ನಮ್ಮ ನರ್ಮದೆಗೆ ಇವನೇ ಯೋಗ್ಯ ಗಾನ ಶಿಕ್ಷಕನಾಗಬಹುದು. (ಪ್ರ) ಅಯ್ಯಾ, ದಯಮಾಡಿಸಿರಿ, ನನ್ನ ಜತೆಯಲ್ಲಿ.

**ನಾರದ:**— ದೀರ್ಘಾಯುವಾಗು. ನನಗೀಗ ನರ್ಮದಾತಾಯಿಯವರ ದರ್ಶನವಾಗುವುದೇ?

**ಮದನ:**— ಅಹುದು, ಬನ್ನಿ, ತ್ವರೆಮಾಡಿರಿ. (ತೆರಳುವರು.)

---

## ಎರಡನೇ ದೃಶ್ಯ.

(ಮದನರಾಯರ ಮನೆಯ ಒಂದು ವಿಶಾಲವಾದ ಕೊಠಡಿ. ಚಿತ್ರಗಳಿಂದ ಗೋಡೆಗಳು ರಂಜಿತವಾಗಿವೆ. ಅಲ್ಲಲ್ಲಿ ಸೊಗಸಾದ ಕುರ್ಚಿಮೇಜುಗಳಿವೆ. ಒಂದು ಕಡೆ ಸುಖಾಸನ (Sofa) ಇದೆ. ಮಗ್ಗುಲಲ್ಲಿ ಕಾಲಿನ ಹಾರ್ಮೋನಿಯಂ ಇದೆ.)

(ನಾರದನು ತನ್ನಷ್ಟಕ್ಕೆ ಹಾಡುತ್ತ ನಿಂತಿರುವನು. ಮದನರಾಯನು ಕೊಠಡಿಯಲ್ಲಿ ಕಾಲಿಡಲು)

**ನಾರದ:**— ಸ್ವಾಮಿ, ಸಾಧ್ವೀಮಣಿ ನರ್ಮದೆಯವರು ಬಂದರೇ?

**ಮದನ:**— ಮಿಸ್ಟರ್ ನಾರದ್.

**ನಾರದ:**— ಮಿಸ್ಟರ್ ನಾರದ್ ಎಂದರೇನು?

**ಮದನ:**— ಇಲ್ಲಿ ಗೌರವದಿಂದ ಯಾರನ್ನಾದರೂ ಸಂಬೋಧಿಸುವ ಮೊದಲು ಮಿಸ್ಟರ್— ಎಂಬ ಉಪಪದವನ್ನು ಸೇರಿಸುವರು. ತಾವಿನ್ನು ಇಲ್ಲಿಯ ರೂಢಿನೇಮಗಳನ್ನು ತಿಳಿದುಕೊಳ್ಳಬೇಕಾಗುವುದು. ಇರಲಿ, ನೀವೀಗ ನರ್ಮದಾಬಾಯಿಯವರ ವಿಚಾರ ಕೇಳಿದಿರೇನು?

**ನಾರದ:**— ಅಲ್ಲ, ನರ್ಮದಾತಾಯಿಯವರ ವಿಚಾರ.

**ಮದನ:**— ಅವರನ್ನೇ ನಾನೆನ್ನುವುದು. ನರ್ಮದಾತಾಯಿಯವರನ್ನು ಬಾಯಿಯವರೆನ್ನುವುದು. ಇಲ್ಲಿ ತಾಯಿಯವರೇ ಬಾಯಿಯವರು, ಬಾಯಿಯವರೇ ತಾಯಿಯವರು. ಅವರು ಈಗ ಮಹಿಳಾಸಭೆಗೆ ಉಪನ್ಯಾಸಕೊಡಲು ಹೋಗಿರುವರು. ಇಷ್ಟ

ರಲ್ಲಿಯೇ ಬರಬಹುದು. ಅಷ್ಟರೊಳಗೆ ತಾವು ಒಂದು ಕೆಲಸ ವನ್ನು ಮಾಡಬೇಕು.

**ನಾರದ:**— ಅವರ ದರ್ಶನಕ್ಕಾಗಿ ಏನನ್ನೂ ಮಾಡಲು ಸಿದ್ಧನು.

**ಮದನ:**—ಮುಖ್ಯವಾಗಿ ತಾವು ಸ್ವರ್ಗದಿಂದ ಬಂದವರೆಂದು ಇಲ್ಲಿಯ ಜನರ ಮುಂದೆ ಹೇಳಿದರೆ ನಗುವರು. ಹಾಗೆಯೇ ವಿಷ್ಣುವಿ ನಿಂದ ಕಳುಹಿಸಲ್ಪಟ್ಟವನೆಂದರೆ ಇನ್ನಷ್ಟು ಪರಿಹಾಸ್ಯಕ್ಕೆ ಗುರಿ ಯಾಗುವಿರಿ.

**ನಾರದ:**— ಅದೇನು? ನಿಮ್ಮ ಜನರು ಸ್ವರ್ಗವಿದೆಯೆಂದು ನಂಬುವು ದಿಲ್ಲವೇ? ದೇವಲೋಕದ ನಾರದನಲ್ಲಿ ಅವರು ವಿಶ್ವಾಸ ವನ್ನಿಡರೇ?

**ಮದನ:**— ಮಿ। ನಾರದ. ಇದು ಕಲಿಯುಗ ನಿಮ್ಮ ಕೆಲಸವಾಗ ಬೇಕಾದರೆ ನೀವು ಇಲ್ಲಿಯ ಜನರಿಗೆ ತಕ್ಕಂತೆ ಇರಬೇಕು. ಅಲ್ಲದೆ ನಿಮ್ಮ ಕಾವಿತಂಬುರಿಗಳನ್ನು ಕಂಡರೆ ಭಿಕ್ಷೆಯೆತ್ತಲು ಬಂದ ತಿರುಕನೆಂದು ತಿಳಿದಾರು.

**ನಾರದ:**—ಏನು! ನಿಮ್ಮ ಜನರಿಗೆ ಅಷ್ಟೂ ತಿಳಿವಿಲ್ಲವೇ? ಅವರು ಬೇಕಾದಂತೆ ತಿಳಿಯಲಿ. ನನಗೆ ನರ್ಮದಾತಾಯಿಯವರ ದರ್ಶನವಾದರಾಯಿತು.

**ಮದನ:**— ಹಾಗಾದರೆ ನೀವು ಕೆಲವು ದಿವಸಗಳಾದರೂ ಇಲ್ಲಿರಲು ಬಯಸುವದಿಲ್ಲವೇ?

**ನಾರದ:**—ನರ್ಮದಾತಾಯಿಯವರು ಹೇಳಿದಷ್ಟು ದಿನ ಇಲ್ಲಿರುವೆನು.

**ಮದನ:**— ಹಾಗಾದರೆ ಇಲ್ಲಿಗೆ ತಕ್ಕಂತೆ ನೀವು ಇರಬೇಕು. ಗತ್ಯಂ ತರವಿಲ್ಲ. ಮುಖ್ಯವಾಗಿ ನರ್ಮದಾಬಾಯಿಯವರೇ ನಿಮಗೆ ಹಾಗೆ ಹೇಳುವರು. ಬನ್ನಿರಿ, ಚರ್ಚಿಸಬೇಡಿರಿ. ಕಾಲಕ್ಕೆ ಸರಿ

ಯಾದ ವೇಷಭೂಷಣಗಳನ್ನು ಮಾಡಿಕೊಳ್ಳಿರಿ. ಆ ತಂಬು
ರಿಯು ಬೇಡ. ಇಲ್ಲಿ ಕೊಡಿರಿ.

**ನಾರದ:**—ತಂಬುರಿಯೇ? ನಾದಬ್ರಹ್ಮನು ಸಿಟ್ಟಾದರೆ?

**ಮದನ:**—ಏನೂ ಸಿಟ್ಟಿಲ್ಲ. ನಾನು ಹೇಳುತ್ತೇನೆ. ಇಲ್ಲಿ ಕೊಡಿ.
ಅದರ ಬದಲು ಹಾರ್ಮೋನಿಯಂ ಎಂಬ ಭಯಂಕರ ವಿಚಿತ್ರ
ವಾದ್ಯವನ್ನು ಕೊಡುವ. ಬನ್ನಿ. ಅವರು ಬರುವುದರೊಳಗಾಗಿ
ನೀವು ನಮ್ಮಂತೆ ಉಡುಗೆಧರಿಸಿ ಸಿದ್ಧವಾಗಿರಬೇಕು.

**ನಾರದ:**—ಅವರು ಬರಲಿ.

**ಮದನ:**—ಅವರ ಜತೆಯಲ್ಲಿ ಇತರರೂ ಬರುವರು. ಅವರ ಮೇಲೂ
ನಿಮ್ಮ ವರ್ಚಸ್ಸು ಬೀಳಲಿ. ಬನ್ನಿ, ಬನ್ನಿ . . .

**ನಾರದ:**—(ಅ) ಈ ಪುಣ್ಯಾತ್ಮನು ಹೇಳುವ ಮಾತುಗಳನ್ನು ನಾನು
ತಿರಸ್ಕರಿಸಬಾರದು. ಈ ಜನರಿಗೆ ಸರಿಯಲ್ಲದ ಉಡುಗೆಯನ್ನು
ಧರಿಸಿ ಯಾರೂ ನನ್ನನ್ನು ಗುರುತಿಸಲಾರದೆ ಹೋದರು.
ಆದುದರಿಂದ ಮೊದಲು ನರ್ಮದಾದೇವಿಯವರ ಪ್ರೇಮವನ್ನು
ಗಳಿಸಿ ನನ್ನ ನಿಜವೇಷವನ್ನು ತೋರಿದರಾಯಿತು.

**ಮದನ:**—ಬನ್ನಿರೆಂದೆನಲ್ಲ. (ಅವರನ್ನು ಒಳಕ್ಕೆ ಕರೆದುಕೊಂಡು ಹೋಗುತ್ತ)
ಈ ಮರುಳನನ್ನು ಮೆಲ್ಲಗೆ ಹಾದಿಗೆ ತರಬೇಕು. ನರ್ಮದೆಗೆ
ಈ ಪ್ರಾಣಿಯ ನಿಜಸ್ಥಿತಿಯನ್ನು ತಿಳಿಸಿ ಅವನ ಮನಸ್ಸನ್ನು
ನೋಯಿಸದಂತೆ ವರ್ತಿಸಬೇಕೆಂದು ಹೇಳಿದರಾಯಿತು.

(ಇಬ್ಬರೂ ತೆರಳಲು, ಕೊಠಡಿಯಲ್ಲಿ ನರ್ಮದೆಯೂ ಅವಳ ಗೆಳತಿ
ಚಮೇಲಿಯೂ ಬರುವರು. ಇಬ್ಬರೂ ಅತಿಶಯದ ಬೆಡಗಿನ
ಉಡುಗೆ ವಯ್ಯಾರದ ನಡಿಗೆಗಳುಳ್ಳವರು.)

**ಚಮೇಲಿ:**—ಹೇಗಿರುವಿರಿ ಯಜಮಾನರೇ?

**ಮದನ:**— ಕ್ಷೇಮ. ನೀನೂ ಚೆನ್ನಾಗಿರುವೆಯಷ್ಟೆ. ನರ್ಮದಾ, ಇತ್ತ ಬಾ (ಅವಳನ್ನು ಕರೆದುಕೊಂಡು ಮರೆಗೆ ಸರಿದು ಮೆಲ್ಲುಡಿಯಿಂದ) ಇಂದು, ನಿನ್ನ ಸಂಗೀತದ ಶಿಕ್ಷಣಕ್ಕಾಗಿ ಒಬ್ಬ ತೀರ ಪ್ರವೀಣನೊಬ್ಬನನ್ನು ತಂದಿರುವೆನು. ಮಾತ್ರ, ಸ್ವಲ್ಪ ಭ್ರಾಂತನಿರಬೇಕು. ಕೇಳಿದರೆ ತಾನು ದೇವಮುನಿಯಾದ ನಾರದನೆನ್ನುವನು. ಬರುವಾಗ ನಾರದನಂತೆ ಉಡುಗೆ ತಂಬುರಿಗಳನ್ನು ಧರಿಸಿ ಬಂದಿದ್ದನು. ಅವನ ಈ ಕಲ್ಪನೆಯನ್ನು ನಾವು ನಿರಾಕರಿಸದಿದ್ದರೆ ಇಲ್ಲಿಯೇ ನಮ್ಮೊಡನೆ ಕೆಲವು ಕಾಲವಾದರೂ ಇರಬಹುದು. ಈಗ ನನ್ನ ಆಗ್ರಹಕ್ಕಾಗಿ ಉಡುಗೆಯನ್ನು ಬದಲಿಸಿ ಬರಲು ಹೋಗಿರುವನು. ಎಚ್ಚರದಿಂದ ಅವನೊಡನೆ ವರ್ತಿಸಬೇಕು. ಆದರೆ ನರ್ಮದಾ, ಅವನಂಥ ಹಾಡುಗಾರರನ್ನು ನಾನು ಕೇಳಿರಲಿಲ್ಲ.

**ನರ್ಮದಾ:**— ನೀವು ಪರಿಹಾಸ್ಯಮಾಡುವಿರಿ.

**ಮದನ:**— ಇಲ್ಲ ನರ್ಮದಾ, ಅವನೆಲ್ಲೋ ನಾಟಕಶಾಲೆಯಲ್ಲಿದ್ದು ತಲೆ ಕೆಡಿಸಿಕೊಂಡವನಿರಬೇಕು. ಇರಲಿ, ಸುಮ್ಮನಿರು. ಅಲ್ಲೇ ಬಂದನು. (ನಾರದನು ಅಷ್ಟರಲ್ಲಿ, ಈಗಿನವರಂತೆ ಕೋಟು, ಷರಾಯಿ, ಇಜಾರು, ಬೂಟುಗಳನ್ನು ಧರಿಸಿ ಅವುಗಳ ಅನಾನುಕೂಲತೆಯಲ್ಲಿ ಅನುಕೂಲತೆಯನ್ನು ತರಲೆತ್ನಿಸುತ್ತ ಬರುವನು. ಮದನನು ಅವನ ಬಳಿಗೆ ಹೋಗಿ ಕೈಹಿಡಿದು ನರ್ಮದೆಯ ಪರಿಚಯವನ್ನು ಮಾಡಿಕೊಡಲು ತೊಡಗುವನು.) ಬನ್ನಿ ಮಿ॥ ನಾರದ್. ಇವರೇ ನರ್ಮದಾ ತಾಯಿಯವರು.

**ನಾರದ:**— ಏನು? ಇವರೇನು ನರ್ಮದಾತಾಯಿಯವರು? ಅಲ್ಲ ಮಿಸ್ಟರ್ ನರ್ಮದಾಬಾಯಿಯವರು . . . .

**ಮದನ:**— ಮಿ। ನಾರದ. ಮಿಸ್ಟರ್ ಎಂದು ಪುರುಷರನ್ನು ಮಾತ್ರ ಸಂಬೋಧಿಸಬೇಕು.

**ನಾರದ:**— ಸ್ತ್ರೀಯರು ಮಿಸ್ಟರ್ ಆಗಲಾರರೇ! ಹಾಗಾದರೆ ಅವರನ್ನು ಮಿಸ್ಟ್ರಿ ಎಂದು ಕರೆಯುವಿರಾ? ಮಿಸ್ಟರಿ ನರ್ಮದಾ—ಎನ್ನಬೇಕಲ್ಲವೇ?

**ಮದನ:**—(ನಕ್ಕು) ಹಾಗೂ ಅಲ್ಲ. ಮಿಸೆಸ್ ಎನ್ನುವರು.

**ನಾರದ:**— ತುಂಬಾ ಸಂತೋಷ. ನಮ್ಮ ದೇವಲೋಕದಲ್ಲಿ ದೇವಿಯೆಂದು (ಮದನನನ್ನು ಕಂಡು ಸ್ತಂಭಿತನಾಗಿ) ಇಲ್ಲ . . . . . ನಮ್ಮ ದೇಶದಲ್ಲಿ 'ದೇವಿ'ಯೆಂದು ಸ್ತ್ರೀಯರನ್ನು ಸಂಬೋಧಿಸುವರು. ಇರಲಿ ತಾಯಿ, ನಾನು ತಮ್ಮ ದರ್ಶನಕ್ಕಾಗಿ ಇಲ್ಲಿಯತನಕ ಬಂದೆ. ಇಂದಿಗೆ ಕೃತಾರ್ಥನಾದೆ.

**ನರ್ಮದಾ:**— (ನಾರದನಿಗೆ ಒಡನೆ ಶೇಕ್‌ಹೇಂಡ್ ಮಾಡಹೋಗುವಳು. ನಾರದನು ತಬ್ಬಿಬ್ಬಾಗುವನು.) ಮಿ। ನಾರದ, ನಮ್ಮ ಯಜಮಾನರಿಂದ ತಮ್ಮ ಪರಿಚಯವನ್ನು ತಿಳಿದು ಆನಂದವಾಯಿತು. ನಿಮಗೆ ನಮ್ಮ ಗೃಹದಲ್ಲಿ ಸುಸ್ವಾಗತವು. ಮಿ। ನಾರದರೇ, ಇವರು ನನ್ನ ಗೆಳತಿಯರಾದ ಮಿಸ್ ಚಮೇಲಿಯವರು.

**ನಾರದ:**— ಮಿಸ್ ಚಮೇಲಿಯವರೆಂದೇನು ಇವರ ಹೆಸರು? (ಚಮೇಲಿಯು ಶೇಕ್‌ಹೆಂಡ್ ಮಾಡಲು ಬರುವಳು. ನಾರದನು ಕೈಸೆಳೆದರೂ ಅವಳು ಹಸ್ತಲಾಘವ ಮಾಡಿ ಸುಮ್ಮನಾಗುವಳು.) (ಆ) ಇಂಥ ಹೆಸರನ್ನು ನಾನು ಕೇಳಿಲ್ಲ. ಹೂಂ, ಅದೆಲ್ಲ ಆಡಬಾರದು. (ಪ್ರ) ಇವರು ಚಮೇಲಿ ತಾಯಿಯವರೇ? ಅವರ ಆರ್ಯರ ಹೆಸರೇನು ದೇವಿ?

**ನರ್ಮದಾ:**— ಅವರು ಮಿಸ್— ಎಂದರೆ ಮಿಸ್ . . . . ಅಂದರೆ ಅವಿವಾಹಿತರು.

**ನಾರದ:**— ಬ್ರಹ್ಮಚಾರಿಣಿಯರೇ! ಆನಂದವು. ದೇವಿ ಚಮೇಲಿ, ನಾನೂ ಅವಿವಾಹಿತನು. ದೇವಮುನಿಯು, ಅಲ್ಲಲ್ಲ ಮಿ| ನಾರದನೆಂದು ನನ್ನ ನಾಮಾಂಕಿತವು.

**ನರ್ಮದಾ:**— ಚಮೇಲಿ, ಮಿ| ನಾರದರು ತೀರ ಗಾನಪ್ರವೀಣರೆಂದು ನಮ್ಮ ಯಜಮಾನರು ಹೇಳುತ್ತಾರೆ. ಮಿ| **ನಾರದ್**— ನಮ್ಮ ಚಮೇಲಿಯು ಅಪ್ರತಿಮ ಹಾಡುಗಾರ್ತಿಯು. ಅವಳ ಕಂಠಸ್ವರವು ಕೋಗಿಲೆಯಂತೆ. ಈ ಪ್ರಸಂಗದಲ್ಲಿ ನಾವು ನಿಮ್ಮ ಸಂಗೀತದ ಜಲಸವನ್ನು ಏಕೆ ಜರುಗಿಸಬಾರದು?

**ನಾರದ:**— ದೇವಿಯವರ ಅಪೇಕ್ಷೆಯಂತಾಗಲಿ. ಮಿ| ಮದನರಾಯರೇ, ನನ್ನ ತಂಬುರಿಯನ್ನೆಲ್ಲಿರಿಸಿದಿರಿ? ಬೇಡ, ಬೇಡ. ಅದೇನೋ ಬೇರೆ ವಾದ್ಯವಿದೆಯೆಂದಿರಲ್ಲ. ಆದರೆ ನನಗೆ ಅದರ ಪರಿಚಯವಿಲ್ಲ. . . . ಇರಲಿ, ಚಮೇಲಿ ದೇವಿಯವರು ಮೊದಲಿಗೆ ಹಾಡಿದರೆ . . . .

**ಚಮೇಲಿ:**— ಏಕೆ ನರ್ಮದಾ, ನಿನ್ನಿಂದಲೇ ಪ್ರಾರಂಭವಾಗಲಿ.

**ನರ್ಮದಾ:**— ನನ್ನ ಹಾಡನ್ನು ಅವರು ನಿತ್ಯವೂ ಕೇಳಬಹುದು. ನೀನಾದರೆ ಅಪೂರ್ವಕ್ಕೆ ಬರುವವಳು.

**ಮದನ:**— ಹಾಡು, ಚಮೇಲಿ ಹಾಡು.

**ಚಮೇಲಿ:**— ನಿಮ್ಮೆಲ್ಲರ ಇಚ್ಛೆಯಿದ್ದಂತಾಗಲಿ. (**ಹಾರ್ಮೋನಿಯಂ ನುಡಿಸುತ್ತ ಹಾಡುವಳು. ನಾರದನು ಅದರ ಬಳಿಗೆ ಸರಿದು ವಿಸ್ಮಿತನಾಗಿ ನಿಲ್ಲುವನು.**)

**ನಾರದ:**—ಹಾ! ಇದು ನವೀನ ವಾದ್ಯವು. ನಮ್ಮ ದೇವಲೋಕದಲ್ಲಿಲ್ಲ.

**ಮದನ:**— ನಾರದರೇ, ಹೇಳಿದುದನ್ನು ಮರೆತುಬಿಟ್ಟಿರಾ?

**ನಾರದ:**— ಇಲ್ಲ . . . ಸರಿ . . ತಾಯಿ, ನಿಮ್ಮ ಗಾನತರಂಗದಿಂದ ನಾದಬ್ರಹ್ಮನ ಸೇವೆಯಾಗಲಿ.

**ಚಮೇಲಿ:**— ಈ ಮನುಷ್ಯನೇನೆನ್ನುತ್ತಿರುವನು?

**ನರ್ಮದಾ:**— ನೀನು ಹಾಡಲು ತೊಡಗು.

**ಚಮೇಲಿ:**— (ಹಿಂದುಸ್ತಾನಿಯಲ್ಲಿ, ವಿಷಯವಾಸನೆಯಿಂದ ತುಂಬಿದ ಗಜಲೊಂದನ್ನು ಹಾಡುವಳು.)

**ನಾರದ:**— (ಆ) ಹಾ! ಇದೆಂಥ ಹಾಡು? ಕೇವಲ ವಿಷಯವಾಸನೆಯಿಂದ ತುಂಬಿರುವುದು. (ಪ್ರ) ಮಿ। ಮದನರಾವ್, ಇತ್ತ ಬನ್ನಿರಿ. (ಬಳಿಗೆ ಕರೆದು) ಇವರು ಯಾವ ಪಂಗಡದವರು?

**ಮದನ:**— ಮನುಷ್ಯ ಪಂಗಡ.

**ನಾರದ:**—ನಾಲ್ಕು ವರ್ಣಗಳಲ್ಲಿ ಯಾವ ವರ್ಣದವರು ಎಂದು ಕೇಳಿದೆ.

**ಮದನ:**— ನಾರದರೇ, ಅದನ್ನೆಲ್ಲ ತೆಗೆದುಕೊಂಡು ಏನು ಮಾಡುವಿರಿ? ಕಲಿಯುಗದಲ್ಲಿ ನಿಮ್ಮ ವರ್ಣಗಳೆಲ್ಲಿ?. . . ನಾಲ್ಕು ವರ್ಣಗಳು ಹೋಗಿ, ನಾಲ್ಕು ಲಕ್ಷ ವರ್ಣಗಳಾಗಿವೆ. ಇವರನ್ನು ನಮ್ಮ ನಾಡಿನಲ್ಲಿ ದೇವದಾಸಿಯರೆನ್ನುವರು.

**ನಾರದ:**— ನಾನು ದೇವಮುನಿಯು, ನನ್ನಂತೆ ಇವರೂ ದೇವಸೇವೆಗೆ ತನುವನ್ನು ಅರ್ಪಿಸಿದವರೇ?

**ಮದನ:**— ನಾರದರೇ, ಅವರು ವೇಶ್ಯಾಕುಲದವರು.

**ನಾರದ:**— ಅಂದರೆ ವ್ಯಭಿಚಾರಿ ಜೀವನದವರೆನ್ನುವಿರಾ? ಇಲ್ಲ, ದೇವದಾಸಿಯರೆಂದಿರಿ. ಘನಪಂಥವು ಅವರದು. ಎಂಥ ನೀಚ ಕುಲದಲ್ಲಿ ಹುಟ್ಟಿದ್ದರೂ ಉತ್ತಮ ವೃತ್ತಿಯನ್ನು ಹಿಡಿದಿರುವರೆಂದ ಮೇಲೆ . . . .

**ನರ್ಮದಾ:**— ಮಿ| ನಾರದರೇ, ನಮ್ಮ ಚಮೇಲಿಯು ನಿಮ್ಮದೊಂದು ಹಾಡನ್ನು ಬಯಸುವಳು.

**ನಾರದ:** - ಆಯಿತು ತಾಯಿ. ತಮ್ಮ ಇಷ್ಟದಂತಾಗಲಿ.

(ಮದನರಾಯನನ್ನು ಕರೆಯಲು ಹೊರಗಿನಿಂದ ಆಳೊಬ್ಬನು ಬರುವನು.)

**ಆಳು:**— ಮದನರಾಯರೇ, ಡಾ| ಭಾರ್ಗವರು ನಿಮ್ಮನ್ನು ಕೂಡಲೆ ಬರಹೇಳಿದರು.

**ಮದನ:**— ಮಿ| ನಾರದ, ನಾನೀಗಲೇ ಬರುವೆನು. ನರ್ಮದೆ ಎಚ್ಚರವಾಗಿರು. (ತೆರಳುವನು.)

**ನಾರದ:**— ನನಗೆ ಈ ವಾದ್ಯವನ್ನು ಬಾರಿಸುವ ರೂಢಿಯಿಲ್ಲ. ನನ್ನ ತಂಬೂರಿಯನ್ನು ತರಲೇ . . . .

**ನರ್ಮದಾ:**— ಅದೇನೂ ಬೇಡ. ನಾನು ಶ್ರುತಿಹಿಡಿಯುವೆನು. ನೀವು ಹಾಡಿರಿ.

(ಅವಳು ಹಿಡಿದ ಹಾರ್ಮೋನಿಯಂ ಶ್ರುತಿಗೆ ಸರಿಯಾಗಿ ನಾರದನು ಭಕ್ತಿಪರವಾದ ಹಾಡೊಂದನ್ನು ಹಾಡುವನು.)

**ನಾರದ:**— (ಹಾಡಿ ಮುಗಿಸಿ) ದೇವಿ, ಶ್ರೀಮನ್ನಾರಾಯಣನ ಗುಣ ಗಾನವನ್ನು ಮಾಡಿದಷ್ಟು ಪಾರವಿಲ್ಲ.

**ನರ್ಮದಾ:**— (ಆ) ನಿಜಕ್ಕೂ ಇವನ ಗಾನವು ಅಪ್ರತಿಮವಾದುದೇ ಸರಿ. ಗಾನವಿದ್ದಂತೆ ರಮಣೀಯ ರೂಪು. ಇಂಥವನು ನನ್ನ ಗೆಳಯನಾದರೆ.

**ಚಮೇಲಿ:**— ನರ್ಮದಾ, ಏನು ಯೋಚಿಸುತ್ತ ಕುಳಿತೆ? ಅವರಿಗೆ ಒಂದು ಗಜಲು ಹಾಡಲು ಹೇಳಬಾರದೇ? ಇಡೀ ದಿನ ದೇವರ ಭಜನೆಯನ್ನು ಯಾರು ಕೇಳುತ್ತಿರಬೇಕು?

**ನರ್ಮದಾ:**— ನಾರದರೇ, ದೈವಪರವಾದ ಹಾಡುಗಳಲ್ಲದೆ ಬೇರೆ ಗಜಲುಗಳು ನಿಮಗೆ ಬರುವುದಿಲ್ಲವೇ?

**ನಾರದ:**— ತಾಯಿ, ನೀವೇ ಹಾಗೆ ಹೇಳಿದರೆ! ಇಲ್ಲ ತಪ್ಪಿದೆನು . . . ದೇವಿ, ನನಗೆ ಬೇರೆ ಹಾಡುಗಳು ಬರುವುದಿಲ್ಲ.

**ಚಮೇಲಿ:**— ನರ್ಮದಾ, ಹಾಗಾದರೆ ನಾನು ಹೋಗಿಬರುವೆನು. ಮಿ। ನಾರದರೇ, ವಂದನೆಗಳು. (ಆ) ನಮ್ಮ ಯಜಮಾನರು ತಮ್ಮ ನಾಟಕ ಮಂಡಲಕ್ಕೆ ನಾರದನ ಭೂಮಿಕೆಗೆ ನಟನೊಬ್ಬನು ಬೇಕೆಂಬ ಚಿಂತೆಯಲ್ಲಿದ್ದರು. ಇವನೇ ಸಿಕ್ಕಿದರೆ . . . ರೂಪ, ಗಾನ ಎಲ್ಲವೂ ಚೆನ್ನಾಗಿದೆ. ಹೆಸರು ಸಹ ನಾರದನೆಂದು. ಅವರಿಗೆ ಸುದ್ದಿ ತಿಳಿಸಿ ಇವನನ್ನು ಸೆಳೆಯಬೇಕು.

(ಚಮೇಲಿಯು ತೆರಳುವಳು.)

**ನರ್ಮದಾ:**— ನಾರದರೇ, ನಿಮ್ಮ ಗಾನವು ನನ್ನ ಮನಸ್ಸನ್ನಪಹರಿಸಿದೆ. ನನಗೊಂದು ಹಾಡನ್ನು ಹೇಳಿಕೊಡಲಾರಿರಾ?

**ನಾರದ:**— ತಾಯಿ, ನಿಮ್ಮ ಸೇವೆಗೆಂದೇ ನಾನು ಬಂದವನು.

(ನರ್ಮದೆಯು ಹಾರ್ಮೋನಿಯಂ ಬಳಿ ಕುಳಿತುಕೊಳ್ಳುವಳು. ನಾರದನು ಅವಳ ಕಾಲುಬುಡದಲ್ಲಿ ನೆಲದ ಮೇಲೆ ಮಂಡಿತನಾಗುವನು.)

**ನರ್ಮದಾ:**— ಛೀ ಛೀ . . . . ಅಗದು. ನೀವು ಕೆಳಗೆ ಕುಳಿತಿರುವುದೆಂದರೇನು? ಬನ್ನಿ, ಮೇಲೆ ಕುಳಿತುಕೊಳ್ಳಿರಿ.

**ನಾರದ:**— ಬೇಡ ತಾಯಿ, ತಮ್ಮಂಥ ಸಾಧ್ವಿಯರ ಪಾದಪ್ರದೇಶವೇ ನನ್ನ ಯುಕ್ತ ಸ್ಥಾನ.

**ನರ್ಮದಾ:**— ಹಾಗೆಂದರಾಗದು. ನನ್ನ ಆಗ್ರಹವಿದೆ. ಬನ್ನಿರಿ, ಇಲ್ಲಿ ಮೇಲೆ ಕುಳಿತಿರಿ.

**ನಾರದ:**— ಆಗಲಿ ತಾಯಿ, ತಮ್ಮ ಅನುಜ್ಞೆಯನ್ನು ಮೀರಲಾರೆ.

(ಅವಳ ಬಳಿ, ಸುಖಾಸನದ ಮೇಲೆ ಕುಳಿತಿರುವನು.)

**ನರ್ಮದಾ:**–ಈಗ ಹೇಳಿಕೊಡುವಿರಾ ಏನಾದರೊಂದು ಹಾಡನ್ನು?

**ನಾರದ:**— ಯಾವ ಹಾಡಾಗಬಹುದು?

**ನರ್ಮದಾ:**— ನಿಮಗೆ ಯುಕ್ತವೆನಿಸಿದುದನ್ನು.

(ನಾರದನು ಹಾಡುವನು. ನರ್ಮದೆಯು ಅನುಕರಿಸುವಳು.)

**ನರ್ಮದಾ:**— (ಆ) ಈ ಮೂರ್ತಿಯು ನನ್ನ ಮನಸ್ಸನ್ನು ಅಪಹರಿಸಿದೆ. ಇವನು ನಿಜಕ್ಕೂ ಭ್ರಾಂತನಿರಬಹುದೇ? ಇಲ್ಲವೆ ಇವನಿಗಾಗಿ ಭ್ರಾಂತಿಪಡುತ್ತಿರುವ ನಾನು ಭ್ರಾಂತಳೆ? ಇವನ ರೂಪಲಾವಣ್ಯಗಳು ಮನಮೋಹಿಸುವಂತಿವೆ. ಮೇಲಾಗಿ ಅವಿವಾಹಿತನು.

**ನಾರದ:**— ತಾಯಿ, ಗಾನವು ಹೇಗಿದೆ?

**ನರ್ಮದಾ:**— ನಾರದರೇ, ನೀವು ನನ್ನನ್ನು ತಾಯಿಯೆನ್ನಬಾರದು. ನಾನು ತಮ್ಮ ಚರಣಸೇವಕಿಯು.

**ನಾರದ:**— ಇದೆಂಥ ಮಾತು ತಾಯಿ?

**ನರ್ಮದಾ:**— ತಾಯಿಯೆಂದು ನನ್ನ ಮನಸ್ಸನ್ನು ನೋಯಿಸುವಿರಾ?

**ನಾರದ:**— ಇಲ್ಲ ಸಾಧ್ವಿ.

**ನರ್ಮದಾ:**— ನಾರದರೆ, ನಿಮ್ಮಂಥ ಹಾಡುಗಾರರನ್ನು ನಾನು ಈವರೆಗೆ ಕಂಡಿಲ್ಲ. ನಿಜಕ್ಕೂ ನಿಮ್ಮ ಹಾಡು ದೇವಲೋಕದ ಹಾಡು. ನಾರದರೇ, ನಿಮ್ಮನ್ನು ಕಂಡರೆ ನನಗೂ ನಿಮ್ಮ ದೇವಲೋಕದ ಆಸೆಯಾಗುವುದು.

**ನಾರದ:**— ಸಾಧ್ವಿ, ದೇವಲೋಕವು ನಿಮ್ಮಂಥವರಿಗಲ್ಲದೆ ಇನ್ನಾರಿಗೆ?

(ನರ್ಮದೆಯು ಮೆಲ್ಲಮೆಲ್ಲನೆ ಅವನ ಬಳಿಗೆ ಸರಿದು ಮೆಲ್ಲನೆ ತನ್ನ ಕೈಯಿಂದ ಅವನ ಭುಜವನ್ನು ಸವರುವಳು. ನಾರದನು ಗಾಬರಿಯಾಗುವನು.)

**ನಾರದ:**— (ಆ) ಇದೇನು, ತಾಯಿಯವರು ತೀರ ಸಲಿಗೆಯನ್ನು ತೋರಿಸುತ್ತಿರುವರು.

**ನರ್ಮದಾ:**— ನಾರದರೇ, ನನ್ನಿಂದ ನಿಮ್ಮ ಸೇವೆ ಏನಾಗಬಹುದು?

**ನಾರದ:**— ದೇವಿ, ನಿಮ್ಮ ಸೇವೆಗಾಗಿ ನಾನು ಬಂದವನು.

**ನರ್ಮದಾ:**— ನಿಜವೇ?

**ನಾರದ:**— ತೀರ ನಿಜ.

**ನರ್ಮದಾ:**— ನಾರದರೇ, ಸತ್ಯ ಹೇಳಲೇ, ನಿಮ್ಮನ್ನು ಕಂಡು ನಾನು ಮೋಹಿತಳಾಗಿರುವೆನು (ಅವನ ಕೈಯನ್ನು ಹಿಡಿಯುವಳು). ನನ್ನಿಂದ ನಿಮ್ಮ ಸೇವೆ ಏನಾಗಬಹುದು?

**ನಾರದ:**— (ಆ) ಅರೇ, ಏನಿದು! ಈಕೆಯು ಕಾಮವಶಳಾಗಿ ವರ್ತಿಸುತ್ತಿರುವಳು. ಇಲ್ಲವೆ......ದೇವಿಯು ನನ್ನ ಸತ್ವಪರೀಕ್ಷೆಯನ್ನು ಮಾಡುತ್ತಿರಬಹುದೇ? ಇರಲೂ ಬಹುದು.

**ನರ್ಮದಾ:**— ನಾರದ, ಏನನ್ನು ಮಾಡುವೆ? ನೀನು ನನ್ನ ಆಶೆಯನ್ನು ಪೂರೈಸದಿದ್ದರೆ......

**ನಾರದ:**— ತಾಯಿ ಈ ರೀತಿ ಬಾಲಕನ ಸತ್ವಪರೀಕ್ಷೆಯನ್ನು ಮಾಡಬಾರದು. ದೇವಮುನಿಯಾದ ನಾನು ಆಜನ್ಮ ಬ್ರಹ್ಮಚಾರಿಯು.

**ನರ್ಮದಾ:**— ನಾರದ, ಅದೆಲ್ಲವು ಠಕ್ಕು. ಆಜನ್ಮ ಬ್ರಹ್ಮಚಾರಿಯಾಗಿರುವುದು ಸುಳ್ಳೇ. ನಾರದ, ನನ್ನಂಥ ರಮಣಿಯು ದೊರೆತಿರುವಾಗ ಬ್ರಹ್ಮಚರ್ಯೆಯಿಂದೇನು ಲಾಭ?

**ನಾರದ:**— ತಾಯಿ, ಸಾಕು ಈ ವಿಕಾರಗಳು. (ಆ) ವಿಷ್ಣುವು ಯಾವ ಅರ್ಥದಲ್ಲಿ ಈಕೆಯು ಪತಿವ್ರತೆಯೆಂದನೆಂಬುದನ್ನು ತಿಳಿಯದೆ ಮೂರ್ಖನಾದೆನಲ್ಲ. (ಪ್ರ) ತಾಯಿ, ಶಪಿಸಿ ಬಿಡುವೆನು. ದೂರ ಸರಿ. ನನ್ನ ಕೈಯನ್ನು ಬಿಡು.

**ನರ್ಮದಾ:**— ಏನು ಶಪಿಸುವೆಯಾ? ಹೆಂಗುಸನ್ನು ಶಪಿಸುವೆಯಾ?

**ನಾರದ:**— ಅಯ್ಯೋ ಅನ್ಯಾಯ. ಅನ್ಯಾಯ

**ನರ್ಮದಾ:**— ನಾರದ, ನನ್ನ ಅಭೀಷ್ಟವನ್ನು ನೀನು ಪೂರೈಸದೆ ಹೋದೆಯಾದರೆ ಕೆಡುವೆ.

**ನಾರದ:**— ತಾಯಿ, ಸುಮ್ಮನಿರು.

**ನರ್ಮದಾ:**—(ಆ) ಈತನನ್ನು ಬಗ್ಗುಬಡಿಯಲು ಇದೇ ಉಪಾಯ. (ಪ್ರ) ಅಯ್ಯೋ ಇಲ್ಲಿ ಈ ನೀಚನು ನನ್ನ ಮಾನಹಾನಿಯನ್ನು ಮಾಡುತ್ತಿರುವನು. ಬನ್ನಿರಿ, ಬನ್ನಿರಿ! ಥೂ ಪಾಪಿ, ಒಬ್ಬಂಟಿ ಗಳೇ ಆದ ಅಬಲೆಯ ಮೇಲೆ ಕೈಮಾಡುವೆಯಾ? ನಾರದಾ ಕೈಬಿಡು, ದೂರ ಸರಿ......(ಮದನರಾಯನು ಕೂಗು ಕೇಳಿ ಧಾವಿಸಿ ಬಂದು, ನಾರದನನ್ನು ಸೆಳೆದು, ತುಳಿದು . . . )

**ಮದನ:**—ಪಾಪಿ, ಒಂದೇ ಒಂದು ಕ್ಷಣದಲ್ಲಿ ಎಷ್ಟೆಲ್ಲ ಸಾಹಸಪಟ್ಟೆ. . .

**ನರ್ಮದಾ:**— ನಾಥಾ, ಈ ನೀಚನನ್ನು ಸಂಭಾವಿತನೆಂದು ಹೇಳಿ ದಿರಿ. ಇದೇ ಇವನ ಸಂಭಾವಿತತನ. ನೀವು ಬರುವುದು ತುಸು ಹೆಚ್ಚುಕಡಿಮೆಯಾಗಿದ್ದರೆ ನನ್ನ ಪಾತಿವ್ರತ್ಯವು ಕರಗಿ ನೀರಾಗುತ್ತಿತ್ತು. (ಅಳುವಳು)

**ಮದನ:**—(ಸಿಟ್ಟಿನಿಂದ ಕೆಂಪಾಗಿ ನಾರದನನ್ನು ಹಿಡಿದುಕೊಂಡು) ನರ್ಮದೆ ಅಳಬೇಡ. ಪಾಪೀ, ನಿನ್ನ ಪ್ರಾಣವನ್ನು ಹರಿಸುತ್ತೇನೆ.

**ನಾರದ:**— ಮದನರಾಯರೇ, ನನ್ನದೇನು ಅಪರಾಧವಾಯಿತು? ಅವರೇ, ನನ್ನ ಬ್ರಹ್ಮಚರ್ಯವನ್ನು ಭಂಗಪಡಿಸಲು ಪ್ರೇರಿಸಿ ದವರು.

**ಮದನ:**— ಮುಚ್ಚು ಬಾಯಿ, ಅವಳೆ! ನರ್ಮದೆಯೆ! ಅನ್ಯಾಯ. ಮೂರ್ಖಾ, ನೀನು ಥೇಟು ನಾಟಕೀ ಸನ್ಯಾಸಿ. ನಡಿ, ನಿನಗೆ

ತಲೆ ಸರಿಯಿಲ್ಲವೆಂದು ಸುಮ್ಮನೆ ಬಿಟ್ಟಿರುವೆ. ಈಗಿಂದೀಗಲೇ ಹೊರಡು--ನಡಿ.

(ತಳ್ಳಿಬಿಡುವನು. ನಾರದನು ಧಾವಿಸುವನು. ತನ್ನ ಉಡುಗೆ ತಂಬುರಿಗಳ ನೆನಪಾಗಿ ಮರಳಿ ಓಡಿಬರುವನು.)

**ನಾರದ:**— ನನ್ನ ಕಾವಿ ತಂಬುರಿಗಳನ್ನಾದರೂ ಕೊಡಿಸಿರಿ.

**ಮದನ:**—ಅವನ್ನು ಸುಟ್ಟು ಬೂದಿಮಾಡಿಯಾಯಿತು. ನಡಿಯು ವಿಯೋ ಇಲ್ಲವೊ?

**ನಾರದ:**— ಹರಿ, ಹರೀ, ಎಂಥ ಅವಸ್ಥೆಯಿದು!

(ಅಲ್ಲಿಂದ ಅವಸರದಿಂದ ಕಣ್ಮರೆಯಾಗುವನು.)

---

## ಮೂರನೇ ದೃಶ್ಯ.

(ಊರಿನ ಹಾದಿಯೊಂದು. ನಾರದನು ಧಾವಿಸಿಬಂದು ಮುಗ್ಗರಿಸಿ ಬೀಳುವನು. ವಿಶ್ರಮಿಸಿ, ಬೂಟುಗಳನ್ನು ಕಳಚಿ ಎಸೆದು ತನ್ನ ದುರ್ದೈವವನ್ನು ನೆನೆದುಕೊಳ್ಳುವನು.)

**ನಾರದ:**— ದೇವಾ! ಎಂಥ ಪರೀಕ್ಷೆಯಿದು. ಎಂಥ ಚೇಷ್ಟೆಯಿದು? ಕಲಿಯುಗದಲ್ಲಿ ಸಾವಿತ್ರಿ ಸಮನಾದ ಪತಿವ್ರತೆಯರು ಇಲ್ಲವೆಂದು ಹೇಳಿದರೆ—'ಇರುವರು. ನರ್ಮದೆಯಲ್ಲಿಗೆ ಹೋಗು'—ಎಂದು ಕಳುಹಿ ಈ ರೀತಿ ಅಪಮಾನಪಡಿಸಿದೆಯಾ? ದೇವಾ, ನೀನು ಕೃಷ್ಣನಾಗಿ ನಂದಗೋಕುಲದಲ್ಲಿದ್ದಾಗ ನಿನ್ನ ಮೇಲೆ ಅಪವಾದವೆಸಗಿದೆನೆಂದು ಈ ಪರಿಹಾಸ್ಯಮಾಡಿದೆಯಾ? ಕ್ಷಮಿಸು... ಇನ್ನು ನಾನು ಇಲ್ಲಿ ನಿಲ್ಲಲಾಗದು. ದೇವಲೋಕಕ್ಕೆ ಮರಳುವೆನು. ಏನು! ದೇವಲೋಕವೆ? ಈ ವಿಕಾರದ ಉಡುಗೆಯಿಂದ ಅಲ್ಲಿಗೆ ಹೋದರೆ ನನ್ನನ್ನು ಗುರುತಿಸುವವರಾರು? ತಂಬುರಿಯಿಲ್ಲದೆ ಹೋದರೆ ಇನ್ನಷ್ಟು ಅವಹೇಳನಕ್ಕೆ ಗುರಿಯಾದೇನಲ್ಲ.

(ಚಮೇಲಿಯು ತನ್ನ ಪ್ರಣಯಿ ಹರಿಶ್ಚಂದ್ರನೊಡನೆ ಬರುವಳು. ನಾರದನು ದೃಷ್ಟಿಗೆ ಬೀಳಲು ಅವನನ್ನೇ ತೋರಿಸುವಳು.)

**ಚಮೇಲಿ:**—ಪ್ರಿಯಾ, ಅವನೇ ಮನುಷ್ಯನು.

**ನಾರದ:**—(ಅವರನ್ನು ಕಂಡು) ಭೂಲೋಕದ ಇನ್ನೊಬ್ಬಳು ಪತಿವ್ರತೆಯು ಬಂದಳು. ವಿವಾಹಿತ ನರ್ಮದೆಯೋ ಹಾಗಿರಲು, ಈ ಕನ್ಯೆಯ ಗತಿಯೇನು? ಭೀತಿಯಿಲ್ಲ, ಬಳಿಯಲ್ಲಿ ಪುರುಷನೋರ್ವನಿರುವನು.

**ಹರಿ:**— (ಬಳಿಗೆ ಬಂದು ವಂದಿಸಿ) ಸ್ವಾಮಿ ನಾರದರೇ, ನಮುಸ್ಕಾರ. ನಮ್ಮ ಚಮೇಲಿಯು ತಮ್ಮ ಪ್ರಶಂಸೆಯನ್ನು ಬಹಳವಾಗಿ ಮಾಡಿದಳು. ತಾವು ಅತಿ ದೊಡ್ಡ "ಗವಯಿ"ಗಳಂತೆ!

**ನಾರದ:**- ಗವಯಿ!

**ಹರಿ:**—ಅದೇ ಗವಯಿ--ಭುವಾ—ಅಂದರೆ ಗಾನವಿಶಾರದರೆಂದೆ.

**ನಾರದ:**— ಅಲ್ಲವಯ್ಯ, ನಾನೊಬ್ಬ ಬಡ ಕೀರ್ತನಕಾರನು.

**ಹರಿ:** — ಇರಲಿ ಕೀರ್ತನಕಾರರೇ, ನಾನು ತಾವು ಹೇಳುವ ವೇತನವನ್ನು ಕೊಡುವೆನು. ನನ್ನದೊಂದು ನಾಟಕ ಮಂಡಲವಿದೆ. ನಾಲ್ಕಾರು ತಿಂಗಳಿಂದ ಇದೇ ಊರಿನಲ್ಲಿ ಪ್ರಯೋಗಗಳು ನಡೆದಿವೆ. ನಮಗೆ ನಟರು ಬೇಕಾಗಿರುವರು. ಅದರಲ್ಲಿಯೂ ನಾರದನ ಭೂಮಿಕೆಯನ್ನು ಮಾಡುವವರು. ತಾವು ಬಂದರೆ—

**ನಾರದ:**—ಎಲ್ಲಿಯುವರು ನೀವು? ನಾನು ನಾಟಕದ ನಟನಲ್ಲ.

**ಚಮೇಲಿ:**— ನಾರದರೇ, ತಾವು ಸಿಟ್ಟಾಗಬಾರದು. ತಾವು ನಾರದರು. ನಿಮಗೆ ನಾಟಕದಲ್ಲಿ ಕೊಡುವುದಾದರೂ ಅದೇ ಭೂಮಿಕೆಯನ್ನು. ಅದರಲ್ಲೇನು ಕೊರತೆ? ಬೇಕಾದರೆ ನೀವು ಬೇರೆ ಪಾತ್ರ ವಹಿಸಬೇಡಿ. ಬರೇ ನಾರದನ ಭೂಮಿಕೆಯನ್ನು ಮಾಡಿದರೆ ಸಾಕು.

**ನಾರದ:**— ನನಗೆ ನಿಮ್ಮ ಭೂಲೋಕದ ತಂಟೆಯೇ ಸಾಕು.

**ಚಮೇಲಿ:**— ಸಾಯುವ ತನಕಾದರೂ ಅಲ್ಲಿರಬೇಕಲ್ಲ.

**ನಾರದ:**—(ಆ) ಹುಚ್ಚು ಹುಡುಗಿಯಿವಳು ದೇವಮುನಿಯಾದ ನಾರದನಿಗೆ ಸಾವಿಲ್ಲವೆಂದು ತಿಳಿದಿಲ್ಲ. ಆದರೆ ಇವರ ಮುಂದೆ ಅದನ್ನು ಹೇಳಿ ಉಪಯೋಗವಿಲ್ಲ.

**ಚಮೇಲಿ:**— ಸ್ವಾಮಿ ನಾರದರೆ, ನನ್ನ ಆಗ್ರಹಕ್ಕಾಗಿ ಅಷ್ಟು ಮಾಡಿ ಬಿಡಿ. ನಿಮಗೆ ಬೇಕಾದರೆ ೧೦೦–೨೦೦ ರೂಪಾಯಿಗಳ ಅಡ್ವಾನ್ಸನ್ನೂ ಕೊಡುವ.

**ನಾರದ:**— "ಅಡ್ವಾನ್ಸು" ಅಂದರೆ?

**ಹರಿ:**— ಅಗಾವು— ಮುಂಗಡ. ನಾಳೆ ಮಾಡುತ್ತೇನೆಂದು ಇಂದೇ ಕೊಳ್ಳುತ್ತಾರಲ್ಲ ಅದು.

**ನಾರದ:**— (ಆ) ಈಗ ನೋಡಿದರೆ, ಉಡುಗೆ ತಂಬುರಿಗಳನ್ನು ಗಳಿಸಲು ಇದೇ ಉಪಾಯ. ಅವು ದೊರೆತ ಬಳಿಕ ಇಲ್ಲಿಂದ ಪಾರಾದರಾಯಿತು. (ಪ್ರ) ಆಯಿತು. ಬರುವೆನು.

**ಹರಿ:**— ತಮಗೆ ಎಷ್ಟು ಅಡ್ವಾನ್ಸು ಬೇಕು? ಸಂಬಳವೆಷ್ಟು? ಸದ್ಯಕ್ಕೆ ೧೦೦ರಂತೆ ಕೊಟ್ಟರೆ ಸಾಕಷ್ಟೆ. ಅದಕ್ಕೂ ಹೆಚ್ಚಿಗೆ ನಾವು ನಮ್ಮ ರಾಜಾಪಾರ್ಟು ಜನರಿಗೂ ಕೊಡುವುದಿಲ್ಲ.

**ನಾರದ:**— ನನಗೆ ಅದಾವುದೂ ಬೇಡ. ಒಂದು ತಂಬುರಿಯನ್ನೂ ಒಳ್ಳೇ ನಾರದನ ಉಡುಗೆಗಳನ್ನೂ ಕೊಡಿಸಿದರಾಯಿತು.

**ಚಮೇಲಿ:**— ಅದಕ್ಕೇನು ಹೆದರಿಕೆ? ಮಿರಜಿನ ತಂಬುರಿಯಿದೆ. ಅವ್ವಲ್ ಬುರುಡೆ ತಂಬುರಿ. ಡ್ರೆಸ್ಸು— ಎಂದರೆ ಹೇಳುವುದಲ್ಲ. ಶುದ್ಧ ರೇಷ್ಮೆಯದೇ. ಜರತಾರಿ ಪಿತಾಂಬರವೇ. ಮೇಲೆ ಜವಾಹಿರಿನ ಕೆಲಸ. ಒಂದು ನಾರದನ ಡ್ರೆಸ್ಸಿಗೇ ೧೫೦೦ ರೂಪಾಯಿ ವ್ಯಯವಾಗಿದೆ. ಹೊರಡಿ . . . . ನಮ್ಮ ಬಂಗಲೆ ಅಲ್ಲೇ ಕಾಣಿಸುತ್ತದೆಯಲ್ಲ; ಇದೇ ಬೀದಿಯ ತಲೆಯಲ್ಲಿ. ಹವೆಗಿವೆಗೆ ಏನೂ ಕೊರತೆಯಿಲ್ಲ. ಊರ ಹೊರಗಿನ ಛತ್ರವನ್ನು ಹಿಡಿದಿದ್ದೇವೆ.

**ಚಮೇಲಿ:**— ಕರಾರುಪತ್ರ ಮಾಡಿಸಿಕೊಂಡು ಬಿಡಿರಿ.

**ಹರಿ:**— ಇರಲಿ ತಮ್ಮ ಊರಾವುದು?

**ನಾರದ:** —ದೇವಲೋಕ.

**ಹರಿ:**—ಹೋ, ನಮ್ಮ ದೇವನ ಹಳ್ಳಿ......

**ನಾರದ:**—ದೇವಲೋಕವೆಂದೆ.

**ಹರಿ:**— ಹಾ! ಇದು... ದೇವನ ಕೋಟೆ. ಇರಲಿ, ತಮ್ಮ ಅಪ್ಪನ ಹೆಸರು, ಅಜ್ಜನದು...ವಯಸ್ಸು...ಅಂದರೆ ಮೊದಲು ಒಂದು ಕರಾರು ಮಾಡಿಸಿಬಿಟ್ಟರೆ ಇಬ್ಬರಿಗೂ ಅನುಕೂಲ......

**ನಾರದ:**— ಕರಾರು ಅಂದರೆ?

**ಹರಿ:**— ನಿಮಗೆ ಅದೆಲ್ಲ ತಂಟೆ ಬೇಡ. ಚಮೇಲಿ, ಆ ಮಸಿ ಡಬ್ಬಿ ಕೊಡು (ಹೆಬ್ಬೆಟ್ಟಿನ ಮುದ್ರೆ ಪಡೆದು— ಕಾಗದಕ್ಕೆ ಅಂಟಿಸಿ)— ಈ ಕಾಗದಕ್ಕೆ ತಮ್ಮ ಹೆಬ್ಬೆಟ್ಟಿನ ಗುರುತಿದ್ದರೆ ಸಾಕು— ಉಳಿದ ಒಕ್ಕಣೆಯನ್ನೆಲ್ಲ ಹಿಂದಿನಿಂದ ಬರೆಯಿಸಿಕೊಳ್ಳುವ. ನಿಮ್ಮ ನಂಬಿಗೆಯಿಲ್ಲವೆಂದಲ್ಲ. ಒಂದು ಭದ್ರತೆ ಮಟ್ಟಿಗೆ. ಆಯಿತು ಬನ್ನಿ — ಚಾ ಅಂಗಡಿಗೆ ಹೋಗಿ ಮನೆಗೆ ಹೋಗುವ.

**ನಾರದ:**— ಇನ್ನೇನು ಹೊಸ ಸಂಕಟವನ್ನು ಕಟ್ಟಿಕೊಂಡೆನಪ್ಪ.

(ತೆರಳುವರು. ಅವರು ಹೋಗಲು ಭೋಜರಾಯ ವಾಮನರಾಯರು ಅಲ್ಲಿಗೆ ಬರುವರು.)

**ಭೋಜ:**— ಆದರೂ ನಮ್ಮ ಕಲಿಯುಗದ ನಾರದ ಸಿಗಲೇ ಇಲ್ಲ; ಸಿಕ್ಕಿದರೆ ಅವನನ್ನು ಹಣ್ಣು ಮಾಡಬಹುದಿತ್ತು.

**ವಾಮನ:**— ಅದಕ್ಕೇ ನಾರದನೆಂದು ಅವನನ್ನು ಕರೆಯುವುದಲ್ಲವೇ?

**ಭೋಜ:**— ಅಲ್ಲ, ಆ ಮನುಷ್ಯನು ಅಷ್ಟು ತಲೆತಲೆಗೆ ಗಂಟು ಹಾಕುವವನೆಂದು ನನಗೆ ತಿಳಿದಿರಲಿಲ್ಲ.

**ವಾಮನ:**— ನಾರದನೆನ್ನುವಾಗ ಬೆಳಿಗಿನ ಪ್ರಾಣಿಯು ನೆನಪಾಗುತ್ತದೆ. ಆ ನಾಟಕೀ ನಾರದನ ಸವಾರಿಯೆಲ್ಲಿ? ಎಂಥ ವಿಚಿತ್ರ ಪ್ರಾಣಿಯದು! ಆದರೆ ಸಂಗೀತ ಮಾತ್ರ.

(ದೂರದಿಂದ ನಾರದನ ಸಂಗೀತ ಕೇಳಬರುವುದು.)

**ಭೋಜ:**— ಸುಮ್ಮನಿರು. ತಿರುಗಿ ಹಾಡು ಕೇಳಿ ಬರುತ್ತಿದೆ. ಸುಮ್ಮನಿರು. ಅವನೇ ಇರಬೇಕು. ಅವನನ್ನು ನಾರದನೆಂದೇ ವಂದಿಸಿ ಚಿಕ್ಕೊಂದು ನಾಟಕಮಾಡುವ.

**ನಾರದ:**— (ಪ್ರವೇಶಿಸುವನು) ಅಯ್ಯೋ, ಪಾರಾದೆ. ಉಡುಗೆಗಂತು ಉಡುಗೆ ಸಿಕ್ಕಿತು. ಆದರೆ ತಂತಿಯಿಲ್ಲದ ತಂಬುರಿಯಿಂದೇನು ಮಾಡಲಿ. ಕೊನೆಗೆ, ಅದೂ ಇಲ್ಲದಿದ್ದರೆ ನನ್ನ ಗತಿಯೇನು? ಇನ್ನು ತ್ವರೆಯಿಂದ ಇಲ್ಲಿಂದ ಪಲಾಯನ ಮಾಡುವ.

**ಭೋಜ:**— ಭೋ ಸ್ವಾಮಿ ನಾರದರೆ, ಸಾಷ್ಟಾಂಗ ನಮಸ್ಕಾರಗಳು.

**ವಾಮನ:**— ಭೋ ದೇವಮುನಿ ನಾರದ, ಸಾಷ್ಟಾಂಗ ಪ್ರಣೀಪಾತಗಳು.

**ನಾರದ:**— ನಾರಾಯಣ, ನಾರಾಯಣ.

**ಭೋಜ:**— ಸ್ವಾಮಿನ್, ಇಂದು ಬೆಳಗ್ಗೆ ನಮಗೆ ನಿಮ್ಮ ಗುರುತು ಹತ್ತಲೇ ಇಲ್ಲ. ಸುಮ್ಮನೆ ಚೇಷ್ಟೆ ಮಾಡಿದೆವು. ತಾವು ದೇವ ಮುನಿಗಳೆಂದು ಈಗ ತಿಳಿಯಿತು.

**ನಾರದ:** — ಸಂತೋಷ.

**ವಾಮನ:**— ಸ್ವಾಮಿನ್, ಈ ಪಾಮರರು ಇಂದು ಪ್ರಾತಃಕಾಲ, ಪರಮಪುರುಷರಾದ ನಿಮ್ಮ ಕಡೆಗೆ ಪ್ರಾಪ್ತಿಸಿದ ಪರಿಪರಿಯಾದ ಪಾಪ ವಿಶೇಷಗಳನ್ನು ಪ್ರೇಮದಿಂದ ಪರಿಹರಿಸಿ ಅವರನ್ನು ಪುನೀತರನ್ನಾಗಿ ಮಾಡಲಾರಿರಾ?

**ನಾರದ:**— ಚಿಂತಿಸಬೇಡಿರಿ, ವ್ಯಥಾ.

**ವಾಮನ:**— ಸ್ವಾಮಿನ್, ತಾವು ಎಲ್ಲಿಗೆ ಸಾಗುತ್ತಿರುವಿರಿ? ಅಲ್ಲ ಬಿಜಯಂಗೈಯ್ಯುತ್ತಿರುವಿರಿ.

**ನಾರದ:**— ಕ್ಷೀರ ಸಾಗರಕ್ಕೆ.

**ವಾಮನ:**— ದೋಣಿಯು ಬೇಡವೇ?

**ನಾರದ:**— ದೋಣಿಯು.

**ವಾಮನ:**— ತಪ್ಪಿದೆ; ನೌಕೆಯು ಬೇಡವೇ?

**ನಾರದ:**— ಭೋ ಮಾನವಗಣ, ದೇವಮುನಿಯಾದ ನನಗೆ ನೌಕೆಯೇಕೆ? ಭವಸಾಗರವನ್ನು ದಾಟದವರಿಗೆ ನೌಕೆಯೇ?

**ವಾಮನ:**— ದೇವಮುನಿ, ಈ ಬಡ ಮಾನವ ಕೀಟಗಳನ್ನು ತಮ್ಮ ಜತೆಯಲ್ಲಿ ಒಯ್ಯಲಾರಿರಾ?

**ನಾರದ:**—ನೀವು ಸತ್ಕರ್ಮನಿರತರಾದಲ್ಲಿ ಒಂದು ದಿನ ಬಂದೇಬರುವಿರಿ.

**ವಾಮನ:**— ಒಂದು ದಿನ ಬಂದರೇನು? ನಮಗೆ ಈಗಲೆ ನಿಮ್ಮೊಡನೆಯೇ ಬರುವ ಮನಸ್ಸು.

**ನಾರದ:**— ನೀವು ಈ ಮಾನವ ಶರೀರಗಳಿರಲು ಬರಲಾರಿರಿ.

**ಭೋಜ:**— ಸಾಯಬೇಕೇ?

**ನಾರದ:** — ಈ ಕಾಯವು.

**ವಾಮನ:** -- ನೀವು ಹೋಗುತ್ತಿರುವರಲ್ಲ.

**ನಾರದ:** — ನಾನು ಚಿರಂಜೀವಿಯಲ್ಲವೇ?

**ವಾಮನ:**— ಯಾರ ಚಿರಂಜೀವಿಯೆಂದು ತಿಳಿಯಲಿಲ್ಲ.

(ಕೃಷ್ಣರಾಯನು ಆ ಹಾದಿಯಾಗಿ ಬಂದು ಇವರನ್ನು ಕಂಡು ಓಡುವನು)

ಲೇ, ಭೋಜರಾಯ, ನಮ್ಮ ಕಲಿಯುಗದ ನಾರದ ಕಿಟ್ಟುವನ್ನು ನೋಡು. ಓಡುತ್ತಿದ್ದಾನೆ. ಹಣ್ಣುಮಾಡಬೇಕವನನ್ನು.

**ಭೋಜ:**— ಎಲ್ಲಿ, ಎಲ್ಲಿ? ಈಗ ಬಿಡಬಾರದು.

**ವಾಮನ:**— ಅಲ್ಲಿ— ಅಲ್ಲಿ—

(ಎಂದು ಓಡುವನು. ಅವನನ್ನು ಭೋಜರಾಯನೂ ಹಿಂಬಾಲಿಸುವನು.)

**ನಾರದ:**— ಹಾ! ಪಾರಾದೆನು. ಆ ಇನ್ನೊಬ್ಬ ನಾರದನಾರು? 'ಇವರ ಕಲಿಯುಗದ ನಾರದನು?' ಯಾರೇ ಇರಲಿ, ಅವನಿಂದಾಗಿ ನಾನು ಉಳಿದುಕೊಂಡೆ.

(ಚಮೇಲಿ ಹರಿಶ್ಚಂದ್ರರು ನಾರದನನ್ನು ಅರಸುತ್ತ ಬರುವರು.)

**ಚಮೇಲಿ:**— ಅಲ್ಲಿರುವನು. ವೇಷವನ್ನು ಹಾಕಿಯೇ ಹಾದಿಯ ಮೇಲೆ ನಿಂತಿರುವನು. ಇವನಿಗೇನು? ಮರುಳೇ

**ಹರಿ:**— ಏ ನಾರದಾ, ನಿಲ್ಲು. ನಿಲ್ಲು.

**ನಾರದ:**— ಅಯ್ಯೋ, ಇಲ್ಲಿಗೂ ಬಂದರೆ. ಹರಿ! ಹರಿ! ಹರಿ!

(ಎಂದು ತೀವ್ರವಾಗಿ ಧಾವಿಸಿ ಮರೆಯಾಗುವನು.)

(ಹರಿಶ್ಚಂದ್ರನು ತುಸು ದೂರ ಹಿಂಬಾಲಿಸಿ ಹಿಂದಕ್ಕೆ ಬರುವನು.)

**ಹರಿ:**— ಎಲೇ ನಾರದ, ತಪ್ಪಿಹೋದೆಯೆಂದು ತಿಳಿಯಬೇಡ. ನಿನ್ನ ಹೆಬ್ಬೆಟ್ಟಿನ ಮೊಹರದ ಕರಾರು ಪತ್ರವಿದೆ. ನಿನ್ನ ಮೇಲೆ ದಾವೆ ಮಾಡಿ, ನಿನ್ನಿಂದ ನಷ್ಟ ವಸೂಲುಮಾಡದಿದ್ದರೆ ನಾನು ನಾಟಕ ಕಂಪೆನಿ ಯಜಮಾನನೇ ಅಲ್ಲ ...... ಲೇ, ಬೇರೆ ಕಂಪೆನಿಯಲ್ಲಿ ಎಲ್ಲಾದರೂ ಪಾರ್ಟು ಮಾಡಿದಿ, ನಿನ್ನ ಗತಿ ಮೋಕ್ಷವಾಯಿತು ಎಂದು ತಿಳಿ.

---

# ಪಾತ್ರವರ್ಗ.

ತ್ಯಾಂಪಣ್ಣ — ಬಡವ, ಹಣೆಬರಹದ ವಿಶ್ವಾಸಿ. ತನ್ನ ಭೂತಭವಿಷ್ಯಗಳನ್ನು ಹಣೆಬರಹದ ಕೈಯ್ಯಲ್ಲಿ ಒಪ್ಪಿಸಿದವನು.

ನಂಜಪ್ಪ — ತ್ಯಾಂಪನ ನೆರೆಕೆರೆಯವ. ಜ್ಯೋತಿಷ್ಯದಲ್ಲಿ ನಂಬಿಕೆ ಬಹಳ. ತುಸು ಮುಂಗೋಪಿ. ಮಿದುಳು ಕಡಿಮೆ.

ಪುರಾಣಿಕರು — ಅದ್ಭುತ ಜ್ಯೋತಿಷ್ಕರು. ಹರಿತವಾದ ನಾಲಿಗೆಯುಳ್ಳವರು. ತಮ್ಮ ಭವಿಷ್ಯವೊಂದಲ್ಲದೆ ಪ್ರಪಂಚದ ಭವಿಷ್ಯವನ್ನೆಲ್ಲ ಬಲ್ಲವರು.

ಕಾವೇರಿ — ತ್ಯಾಂಪನ ಹೆಂಡತಿ.

ವೆಂಕಮ್ಮ — ನಂಜಪ್ಪನ ಹೆಂಡತಿ.

# ಹಣೆಬರಹ.

## ದೃಶ್ಯ ೧.

[ಶ್ಯಾಂಪಣ್ಣನು ಮನೆಯ ಚಾವಡಿಯಲ್ಲಿ ತಲೆ ಒತ್ತಿಕೊಂಡು ಕುಳಿತಿರುವನು. ಅವನ ಹೆಂಡತಿ ಕಾವೇರಿಯು ಒಳಗೇನೋ ಕೆಲಸದಲ್ಲಿರುವಳು.]

**ಶ್ಯಾಂಪ:**—ಅಯ್ಯೋ ಹಣೆಯ ಬರಹವೇ! 'ನಾನು ಮುಟ್ಟಿದ್ದು ಹೀಗೆ ಮಣ್ಣಾಗಬೇಕೆ? ಚಿನ್ನ ಮುಟ್ಟಿದರೂ ಕಬ್ಬಿಣವೇ ಆಗುವುದು. ಒಟ್ಟಾರೆ ಹಣೆಯ ಬರಹ. ಯಾರನ್ನು ದೂರಿ ಫಲವೇನು? ಬ್ರಹ್ಮ ಬರೆದುದನ್ನು ಯಾರಪ್ಪನಿಂದಲೂ ಅಳಿಸಲು ಬರುವುದಿಲ್ಲ. ಸುಮ್ಮನೆ ಅನ್ನುವದು—'ನಾನು ಮಾಡುತ್ತೇನೆ ನಾನು ಮಾಡುತ್ತೇನೆ' ಎಂದು. ಅವನು ಬರೆದ ಗೆರೆ ಸ್ವಲ್ಪ ಓರೆಯಾಗಿ ಬಿಟ್ಟರೆ, ಇವನು ಮಾಡುವುದು ಅಷ್ಟರಲ್ಲಿಯೇ ಇದೆ. ಹೌದೇ......ಸ್ವಲ್ಪ ಇಲ್ಲಿ ಬರಬಾರದೇ! ಓ ಮನೆಯವಳೇ......ಇವಳಿಗೂ ಕಿವಿ ಕಿವುಡಾಯಿತು. ನನ್ನ ಹಣೆಬರಹವಪ್ಪಾ.

**ಕಾವೇರಿ:**—(ಕೂಗು ಕೇಳಿ ಬರುವಳು.) ಏನು, ಕರೆದಿರೆ?

**ಶ್ಯಾಂಪ:**—ಕೇಳಲಿಲ್ಲವೇ?......ಇರಲಿ, ಮಗುವಿಗೆ ಹೇಗಿದೆ? ಏನಾದರೂ ಸ್ವಲ್ಪ ಜ್ವರ ಬಿಟ್ಟಿದೆಯೋ, ಅಲ್ಲ ನಿನ್ನೆ ಹಾಗೆ . . .

**ಕಾವೇರಿ:**—ಬಿಡುವುದೇನು? ಮೈ ಮೇಲೆ ಭತ್ತ ಹಾಕಿದರೆ ಅರಳು ಆಗುತ್ತದೆ. ಏನೋ ಅಪ್ಪ, ಈ ಜ್ವರದಿಂದ ಮಗು ಉಳಿಯುವುದು ಕಾಣೆ. ಆಸ್ಪತ್ರೆ ವರೆಗೆ ಸ್ವಲ್ಪ ಹೋಗಿ ಏನಾ

ದರೂ ಔಸ್ತಿ ದಾಕ್ತಾರಿಂದ ಬೇಡಿಕೊಂಡು ಬನ್ನಿರಿ ಅಂದರೆ, ನೀವು ಕಂಭ ಹಿಡಿದು ಕುಳಿತವರು ಏಳುವುದೇ ಇಲ್ಲ.

**ತ್ಯಾಂಪ:** — ಏನು ಔಸ್ತಿಯೋ? ಔಸ್ತಿ ಕುಡಿದಷ್ಟು ಜಾಸ್ತಿ, ಗ್ರಹಚಾರ ಕೆಟ್ಟಿರುವಾಗ. ಕಳೆದವಾರ ಕೇಳು ಪಂಡಿತನಿಂದ ಆ ಕಷಾಯ ತಂದು ಕೊಟ್ಟಿತಲ್ಲ; ಏನಾಯಿತು? ಅಂಥ ಇಂಥ ಮದ್ದು, ಎಂಥೆಂಥವರಿಗೆಲ್ಲ ಗುಣವಾಗಿದೆ-ಎಂದನಲ್ಲಾ-ಇಲ್ಲಿ ಆದದ್ದೇನು? ಕೇಳು ಪಂಡಿತನಿಗೇನು ವೈದ್ಯ ಗೊತ್ತಿಲ್ಲ ಎನ್ನುತ್ತಿಯಾ? ಮುಖ್ಯ ನೋಡು......ಔಷಧಗಿವುಷಧ ಎಲ್ಲ ಭ್ರಮೆ; ಬ್ರಹ್ಮ ಬರೆದ ಗೆರೆ ಸರಿಯೋ ಎಲ್ಲಾ ಸರಿ......ಅದರ ಹಣೆಯ ಮೇಲೆ 'ಸಾಯು' ಎಂದು ಬರೆದಿರುವಾಗ ಉಳಿಯುತ್ತದೆಯೋ? ನಿನಗೆ ಭ್ರಮೆ......ಅಲ್ಲದಿದ್ದರೆ ಮಗುವಿನ ಸುದ್ದಿ ಬಿಡು......ದನಕ್ಕೇನು ದಾಡಿ ಬಡಿಯಿತು? ಎರಡೂ ಹೊತ್ತು ಹಾಲು ಇಳುಗುತ್ತಿತ್ತಲ್ಲಾ......ಯಾಕೀಗ ಕೈಹಾಕಲಿಕ್ಕೆ ಬಿಡುವುದಿಲ್ಲ? ಅದನ್ನೂ ಬಿಡು......ನಮ್ಮ ಮನೆ ಮುಂದಿನ ಹೊಲಕ್ಕೇನು ಕೇಡು ಬಡಿಯಿತು?......ನಮ್ಮ ಅಜ್ಜ ಅನ್ನುತ್ತಿದ್ದ: ವರುಷಕ್ಕೆ ಕಡಿಮೆ ಎಂದರೆ ೪೦ ಮುಡಿ ಭತ್ತ ಬರುತ್ತಿತ್ತು ಎಂದು. ನನ್ನ ಕೈಗೆ ಬಂದದ್ದೇ ಸರಿ, ೧೦ ಮುಡಿ ಬರುವುದಿಲ್ಲ. ಈ ವರುಷವಂತೂ ೪೦ ಹೋಗಿ ೪ಕ್ಕೆ ಬಂತು. ಹಣೆಬರಹ ಅಲ್ಲದಿದ್ದರೆ ಹೀಗಾಗುತ್ತಿತ್ತೇ? ಅದನ್ನು ಅಳಿಸುವುದಕ್ಕೆ ನಿನ್ನಿಂದ ಸಾಧ್ಯವೇ, ನನ್ನಿಂದ ಸಾಧ್ಯವೇ?

**ಕಾವೇರಿ:** — ಹೂಂ, ನನಗೇನು? ಹಣೆಬರಹ—ಎಂತ ಶಂಖ ಊದುತ್ತಾ ಕುಳಿತಿರಿ. ದಾಕ್ತಾರರ ಹತ್ತರ ಹೋಗಿರಿ ಅಂದರೆ, 'ಹಣೆಬರಹ' ಅನ್ನುತ್ತೀರಿ. ಒಟ್ಟು ನನ್ನ ಹಣೆಬರಹ ಇದು, ಮಗು ಒಂದಿಲ್ಲದಿದ್ದರೆ......

**ಶ್ಯಾಂಪ:**—ಅಯ್ಯೋ ನಿನ್ನ ಹಣೆಬರಹವೇ. . ನೀನೆನ್ನುವುದೇನು?

**ಕಾವೇರಿ:**—ಅನ್ನುವುದೇನು ಎಂದರೆ. ಗ್ರಹಗತಿ ಚೆನ್ನಾಗಿಲ್ಲವೆಂದು ಗೊತ್ತಿದ್ದು ಸುಮ್ಮನೆ ಕುಳಿತಿದ್ದೀರಲ್ಲ......ಪುರಾಣಿಕರ ಮನೆಗೆ ಏನು ಮೈಲೇ, ಹರದಾರಿಯೇ? ಹೋಗಿ ಜಾತಕ ತೋರಿಸಿ—ಏನು, ಎಂಥದು ಎಂದು ತಿಳಿದುಕೊಂಡು ಬರಬಾರದೇ? ಇಲ್ಲೇ ಹಣೆ ಹಣೆ ಬಡಿದುಕೊಂಡರೆ ಏನು ಬಂದೀತು?

**ಶ್ಯಾಂಪ:**—ಅದೊಂದು ಇನ್ನು ಬಾಕಿ. ಜಾತಕ ಏನು ಹೇಳುತ್ತದೆ ನೋಡುವ. . . ಏನು ಹೇಳುತ್ತದೆ ಎಂತ ಗೊತ್ತೇ ಇದೆ. ಹಣೇ ಬರಹ ಕೆಟ್ಟಾಗ ಜಾತಕ ಹೇಳುವುದೇನು? ನೀನು ಮುಟ್ಟಿದ್ದೆಲ್ಲಾ ಮಣ್ಣು ಅಂತ. ಆಯ್ತು, ಅದೊಂದು ಭ್ರಮೆಯನ್ನು ಯಾಕೆ ತೀರಿಸಿಕೊಳ್ಳಬಾರದು.

**ಕಾವೇರಿ:**—ಹಾಗಾದರೆ ಹಿರಿಯರೆಲ್ಲಾ ಜಾತಕ ಕಾಣುವುದು ಸುಳ್ಳೇನು?

**ಶ್ಯಾಂಪ:**—ಅಲ್ಲ. ಅದನ್ನು ಯಾರು ಸುಳ್ಳು ಎನ್ನುತ್ತಾರೆ? ಮುಖ್ಯವಾಗಿ ನಮ್ಮ ಹಣೆಬರಹ ಕೆಟ್ಟಾಗ ಪುರಾಣಿಕರ ಬಾಯಿಯಿಂದ ಸತ್ಯವೇ ಬರುತ್ತದೆ ಎಂಬುದು ಯಾವ ಧೈರ್ಯ? ಇಲ್ಲ, ಆಯ್ತು, ಸಿಟ್ಟಾಗಬೇಡ, ಹೋಗುತ್ತೇನೆ. ಇಗೋ ಆ ಗೋಡೆಯ ಮೇಲೆ ಬಿದಿರಿನ ಅಂಡೆಯಲ್ಲಿ ಜಾತಕದ ನಕಲು ಇದೆ; ಹಾಗೆ ನಾಗಂದಿಗೆಯಲ್ಲಿ ಎರಡಾಣೆ ಕಾಸು ಇದೆ. ತಾ. . . . ತಾ . . . ಬೇಗ ತಾ . . . (ಹೋಗಿ ಬರುವಳು.)

**ಕಾವೇರಿ:**—ಆಯಿತು. ಈಗ ಮೊನ್ನೆ ಹೇಳಿದ ಸಂಗತಿ. ಹೇಗೂ ಅಲ್ಲಿಗೇ ಹೋಗುತ್ತೀರಿ. ಒಂದು ಪ್ರಶ್ನೆ ಕೇಳಿಬಿಡಿ . . . ಏನು, ನಮ್ಮಪಾಡಗ ಸಿಕ್ಕುತ್ತದೆಯೋ ಇಲ್ಲವೇ ಅಂತ . . . ಅದು ಕದ್ದು

ಹೋದುದೇ ಹೌದಪ್ಪ. ನನಗೆ ಗೊತ್ತು. ಇರಲಿ ಕದ್ದುದು ಯಾರು ಎಂದು ಕೇಳಿಬಿಡಿ.

**ತ್ಯಾಂಪ:**— ಆಯಿತು. ಕೇಳಿಬರುತ್ತೇನೆ. ಪ್ರಶ್ನೆ ಹೇಳುವುದರಲ್ಲಿ ಪುರಾಣಿಕರು ಭಾರಿ ಬುದ್ಧಿವಂತರಂತೆ. ಕೊನೆಗೆ ಜಾತಕದ ಹಣೆಬರಹ ಹೇಗಿದ್ದರೂ ಇದಾದರೂ ಒಂದನ್ನು ತಿಳಿದು ಬರಲಿ... ಅಲ್ಲ, ಬೆಳ್ಳಿ ಪಾಡಗ ಎಂದರೆ ಸುಮ್ಮನೆ ಬರುತ್ತದೆಯೇ? ಈಗಿನ ಕಾಲದಲ್ಲಿ ಎಂಟು ರೂಪಾಯಿ ಇದ್ದರೆ ಒಂದು ಪಾಡಗ ಆಗುವುದಿಲ್ಲ . . . ಅದೂ ಥೇಟು ಚಿನ್ನದಂಥಾ ಬೆಳ್ಳಿ . . . ಆ ಕೆಲಸವೇನು? ಈಗಿನ ಅಕ್ಕಸಾಲಿಗರಿಗೆ ಹಣೆ ಚುಚ್ಚಿಕೊಂಡರೆ ಸಾಧ್ಯವೇ? ಆ ಸುಬ್ಬಯ್ಯ ಅಕ್ಕಸಾಲಿಯ ಕೆಲಸ ಅಂದರೆ ಕೆಲಸ! ಏನು ಮೈಮುರಿದು ಕೆಲಸಮಾಡಿದ್ದ. ಅವನು ಸತ್ತರೆ ಅಷ್ಟೇ ಹೋಯಿತು. ಅವನ ಹೆಸರು ಉಳಿಸಲಿಕ್ಕೆ ಈ ಪಾಡಗ ಒಂದು ಸಾಲದೇ? ದುಷ್ಟ ಮುಂಡೇಗಂಡರು ಅದನ್ನೂ ಜಾರಿಸಿದರು. ನಾನು ಅನ್ನುತ್ತೇನಲ್ಲ: ಇದು ಇನ್ನಾರ ಕೆಲಸವೂ ಅಲ್ಲ. ಆ ದಿನ ನಮ್ಮ ಮನೆಗೆ ಕೋಳಿ ಕೂಗುವ ಮೊದಲೇ ಮಂಡೆ ಹಾಕಿದನಲ್ಲಾ . . . ಆ ಪಂಚಮಾರಿಷ್ಟ . . . ಅವನ ಕೆಲಸ.

**ಕಾವೇರಿ:**— ಯಾರನ್ನು ಅನ್ನುತ್ತೀರಿ?

**ತ್ಯಾಂಪ:**— ಯಾರು ಅಂದರೆ . . . ಅವ . . . ಅವ . . . ಸುಟ್ಟವ, ಅವನ ಹೆಸರು ನೆನಪಿಗೆ ಬರುತ್ತೆಯೇ? . . . .ಅವ— ಅವ— ನಂಜಪ್ಪ. ಅಲ್ಲದಿದ್ದರೆ ಅವನಿಗೇನು ಕೆಲಸವಿತ್ತು, ಆ ದಿನ ನಮ್ಮ ಮನೆಯಲ್ಲಿ? ಮೂರು ಝಾವ ಇಡಿ, ಮನೆಯ ಜಗುಲಿಯ ಮೇಲೆ, ಎಲೆ ಅಡಿಕೆ ಜಗಿಯುತ್ತ ಕುಳಿತನಲ್ಲ. ಅವನ ಮಾವನ ಮನೆಯೆಂದೇ? ಮನೆಯ ಮುಂದಿನ ಅಂಗಣ ಇನ್ನೂ

ನೋಡಲಿಕ್ಕೆ ಸಾಧ್ಯವಿಲ್ಲ. ಎಲ್ಲೆಲ್ಲಿಯೂ ತಂಬುಲ ಉಗಿದು ರಣರಂಪಮಾಡಿಬಿಟ್ಟದ್ದಾನೆ. ಇದು ಆ ಅರಿಷ್ಟ ಮುಂಡೇಗಂಡನದೇ ಕೆಲಸ ಎಂದು ಪ್ರಮಾಣಮಾಡಿ ಹೇಳುತ್ತೇನೆ.

**ಕಾವೇರಿ:**— ಹೂಂ, ನೀವು ಹೀಗೆ ಮಾತಾಡುತ್ತ ಕುಳಿತರೆ, ಪುರಾಣಿಕರು ಎಲ್ಲಿ ಸಿಗಬೇಕು? ಆ ಮೇಲೆ ಅವರು ದೇವಸ್ಥಾನಕ್ಕೆ ಹೋಗುವುದಿಲ್ಲವೇ? ಕೊನೆಗೆ ಸಿಗದಿದ್ದರೆ ಹೇಳಿ ಬಿಡಿ — ಇದು ನನ್ನ ಹಣೆಬರಹ ಎಂದು ಇದನ್ನು ನೋಡುವಾಗ, ನಿಮ್ಮ ಕೈಹಿಡಿದದ್ದು ನನ್ನ ಹಣೆಬರಹ.

**ತ್ಯಾಂಪ:**— ಹೋಗುತ್ತೇನೆ, ಮಹಾರಾಯತಿ ಹೋಗುತ್ತೇನೆ. ನನ್ನ ಹಣೆಬರಹಕ್ಕೆ ನೀನೂ ಇಷ್ಟು ಗದರಿಸಲಿಕ್ಕೆ ಶುರುಮಾಡಿದರೆ ಮುಗಿಯಿತು.

---

## ದೃಶ್ಯ ೨.

[ಹಾದಿಯಲ್ಲಿ ತ್ಯಾಂಪಣ್ಣನು ಪುರಾಣಿಕರ ಮನೆಯ ಹಾದಿಹಿಡಿದು ಸಾಗುತ್ತಿರುವನು. ಆಗಲೇ ನಂಜಪ್ಪನ ಸವಾರಿಯು ಬಂದು ಭೇಟಿಯಾಗುವುದು.]

**ತ್ಯಾಂಪ:**—ಹೊತ್ತು ನೊಸಲಿಗೇರುತ್ತ ಬಂದಿತು. ಇನ್ನು ಪುರಾಣಿಕರು ಮನೆಯಲ್ಲೆಲ್ಲಿ ಇರುತ್ತಾರೆ? ಒಟ್ಟು ನನ್ನ ಗ್ರಹಚಾರ. ಅವರು ಸಿಗಲಿಲ್ಲ ಎಂದು ಹೇಳಿದರೆ ಮನೆಯವಳು ಮಹಂಕಾಳಿಯಾಗುತ್ತಾಳೆ. ಇದನ್ನು ಪುರಾಣಿಕರ ಹತ್ತಿರ ಕೇಳುವ ಅವಶ್ಯವೇ ಬೇಡ. ಇದು ಖಂಡಿತಕ್ಕೂ ಆ ನಂಜಪ್ಪ ಮುಂಡೇಗಂಡನ ಕೆಲಸ ಅಲ್ಲದೆ ಇನ್ನೊಬ್ಬನ ಕೆಲಸವಲ್ಲ. ಸಿಕ್ಕಿದರೆ ಅವನ ಮುಖದ ಮೇಲೆ ಉಗುಳಿ ಹೇಳುತ್ತಿದ್ದೆ. ನನಗೇನು ಹೆದರಿಕೆ? ಅವನಲ್ಲ, ಅವನಪ್ಪ ಬಂದರೂ, ಹೆದರುವ ಮಗ ನಾನಲ್ಲ. ಆದರೆ ಕೊನೆಗೆ ನೆರೆಮನೆಯವನೊಡನೆ ನಿಷ್ಠುರ ಕಟ್ಟಿಕೊಂಡರೆ ಎಲ್ಲಾ ಕೆಟ್ಟೇತು ಎಂತ ಸುಮ್ಮನಿದ್ದೇನೆ .... (ದೂರದಿಂದ ನಂಜಪ್ಪನನ್ನು ಕಂಡು) .... ಆಯಿತು, ಇನ್ನು ಕೆಲಸವಾದ ಹಾಗೇ. ದುಷ್ಟ ಮುಂಡೇಗಂಡನ ಮುಖ ಕಂಡ ಮೇಲೆ ಇನ್ನೆಲ್ಲಿ ಪುರಾಣಿಕರು ಸಿಗುತ್ತಾರೆ? ಬೆಕ್ಕಿನ ಪೋರೆಯವನೆಲ್ಲಿ?

**ನಂಜಪ್ಪ:**—ಎಲ್ಲಿ ಹೊರಟೆಯೋ ತ್ಯಾಂಪಣ್ಣ?......ಹಾಗೆಲ್ಲಾ ಮನೆಬಿಟ್ಟು ಹೊರಟವನಲ್ಲ. ಇಂದೇನು ಭಾರೀ ಅಪರೂಪ?

**ತ್ಯಾಂಪ:**—(ಆತ್ಮಗತ) ತೆಗೆದ ಬಾಯಿಗೇ 'ಎಲ್ಲಿಗೆ!' ಅಂಥ ಅವಲಕ್ಷಣದ ಮಾತೇ ಹೊರತು ಬೇರೆಯಿಲ್ಲ. ಹೂಂ, ನನ್ನ ಗ್ರಹ

ಚಾರ. (ಪ್ರಕಾಶ) ಎಲ್ಲಿಗಿಲ್ಲ. ಇಲ್ಲೇ ಪುರಾಣಿಕರನ್ನು ಕಾಣುವ ಎಂದು ಅವರ ಮನೆಯ ಕಡೆಗೆ ಹೊರಟೆ. ಇನ್ನು ಅವರು ಮನೆಯಲ್ಲಿ ಇರುತ್ತಾರೆಯೋ ಇಲ್ಲವೋ, ದೇವರೇ ಬಲ್ಲ.

**ನಂಜ:**— ಏನು ವಿಶೇಷವೋ ತ್ಯಾಂಪಣ್ಣ?......

**ತ್ಯಾಂಪ:**—(ಆ) ಇವನಿಗೆ ಊರಿನ ಪುರಾಣವೆಲ್ಲಾ ಬೇಕು. ಹೂಂ. (ಪ್ರ) ಏನೆನ್ನುವುದು ಮಹಾರಾಯ? ಒಟ್ಟು ಗ್ರಹಚಾರ ಕೆಟ್ಟ ಕಾಲದಲ್ಲಿ ಎಲ್ಲ ಹೀಗೆಯೇ ಆಗುವುದು. ಮನೆಯಲ್ಲಿ ಮಗುವಿಗೆ ಸ್ವಸ್ಥ ಇಲ್ಲ. ಯಾವ ಮುಂಡೇಗಂಡ ದನವನ್ನು ಕಂಡನೋ, ಅದೂ ಹಾಲನ್ನು ಕೊಡುವುದಿಲ್ಲ. ಸಾಲದುದಕ್ಕೆ ನನ್ನವಳ ಕಾಲಿನ ಪಾಡಗ, ಅಚ್ಚ ಅರ್ಧ ಸೇರು ಬೆಳ್ಳಿ ಪಾಡಗ, ಅದೂ ಕಾಣೆ. ಏನೋ ಪ್ರಶ್ನೆ ಕೇಳುವಾ ಅಂತ ಹೊರಟೆ......

**ನಂಜ:**—ಪಾಡಗ ಕದ್ದರೇ! ಯಾವುದು ಆ ಸುಬ್ಬಯ್ಯ ಅಕ್ಕಸಾಲಿ ಮಾಡಿದ್ದು ಅಂದೆಯಲ್ಲಾ ಅದನ್ನೇ?......ದೇವರೇ! ಯಾರೆಂತ ಏನಾದರೂ ತಿಳಿಯಿತೇ?

**ತ್ಯಾಂಪ:**— ಯಾರೆಂದು ಖಂಡಿತ ತಿಳಿದರೆ ಪುರಾಣಿಕರ ಮನೆಗೆ ಹೋಗಬೇಕೆ?

**ನಂಜ:**— ಅಲ್ಲ ಸಂಶಯ......

**ತ್ಯಾಂಪ:**—(ಆ) ಏನೂ ಆಗಲಿ ಬಾಯಿ ಬಿಡುತ್ತೇನೆ. (ಪ್ರ) ಯಾರೆಂದು ಹೇಗೆ ಹೇಳುವುದು? ಅಂತೂ ಆ ದಿನ ನಮ್ಮ ಮನೆಗೆ ಒಬ್ಬನು ಕೋಳಿ ಕೂಗುವ ಮೊದಲೇ ಬಂದು ಕುಳಿತಿದ್ದ, ಕರಿ ಮುಸುಡಿನವನು. ಅವನೇ......

**ನಂಜ:**— ಅದು ಯಾರಣ್ಣ — ಅಂಥ ಕದಿಮ?

**ತ್ಯಾಂಪ:**—ಅಂಥದೆಲ್ಲ ನೀನು ಕೇಳುವುದಲ್ಲ, ನಾನು ಹೇಳುವುದಲ್ಲ. ಖಂಡಿತ ಆದಮೇಲೆ ಬಾಯಿತೆರೆಯಬೇಕು. ಹೂಂ ಬಿಡು. ಹೋಗಿಬರುತ್ತೇನೆ.

**ನಂಜ:**—(ಆ) ಇವನೂ ಅಲ್ಲಿಗೆ ಹೋದರೆ ನನ್ನ ಮನೆ ಒಡಕು ಅಲ್ಲಿ ಬಿಡಿಸಲು ಬರುವುದಿಲ್ಲ. (ಪ್ರ) ತ್ಯಾಂಪಣ್ಣ, ಪುರಾಣಿಕರು ಈಗಷ್ಟೆ ಅವರ ಸೌತೇ ಹಿತ್ತಲಿಗೆ ಹೋದರು ಎಂದು ಕಾಣುತ್ತದೆ. ನೀನು ಒಂದು ಐದು ನಿಮಿಷ ತಡೆದು ಅವರನ್ನು ಕಾಣುವುದಕ್ಕೆ ಹೋಗುವುದೇ ಒಳ್ಳೇದು ಎಂದು ಕಾಣುತ್ತದೆ.

**ತ್ಯಾಂಪ:**—ಅಯ್ಯೋ ಹಣೇಬರಹವೇ! ಅದೂ ಎಣಿಸಿದ ಹಾಗೆ ಆಯಿತೇ? ಇನ್ನು ಅಲ್ಲಿ ಹೋಗಿಯೇ ಉಪಯೋಗವಿಲ್ಲ. ಹಾಗಾದರೆ ಮಧ್ಯಾಹ್ನವೇ ಅವರನ್ನು ಕಾಣುವುದು.

**ನಂಜ:**—ಹೂಂ, ಮಧ್ಯಾಹ್ನ ಬೇಡ. ಇನ್ನೊಂದು ಗಳಿಗೆ ತಡೆದು ಹೋದರೆ ಸಿಗುವುದಿಲ್ಲವೇ? ಮಧ್ಯಾಹ್ನ ಅವರನ್ನೆಲ್ಲಿ ಮನೆಯಲ್ಲಿ ಕಾಣುತ್ತೀಯಾ? ಅವರಿಗೆ ಒಂದೆರಡು ತಾಪತ್ರಯಗಳೇ? ಎದ್ದು ಸೀದಾ ಪುತ್ತೂರಿಗೆ ಹೋದರೂ ಹೋದರೇ. ವಕೀಲ ಕಮ್ತಿಯರು ಬರಲಿಕ್ಕೆ ಹೇಳಿದ್ದರು ಅನ್ನುತ್ತಿದ್ದರು.

**ತ್ಯಾಂಪ:**—ಅದೂ ಒಂದು ಬೇರೆ ಇದೆಯೇ? ಆಯಿತು. ತಡೆದು ಹೋಗುತ್ತೇನೆ. ಹೋಗಲೇ......(ಹೊರಟು) (ಆ) ಅಂತು ಕರಿ ಮುಸುಡಿನವನಿಗೆ ನಾನು ಮಾಡಿದ ಮಂಗಳಾರತಿ ಸಾಕು. (ತೆರಳುವನು.)

(ಪ್ರವೇಶ ಪುರಾಣಿಕರು.)

**ನಂಜ:**—ಹಾ! ಪುರಾಣಿಕರ ಸುದ್ದಿ ತೆಗೆದುದೇ ತಡ. ಅವರೇ ಬಂದರು. ಒಳ್ಳೇ ಆಯುಷ್ಯವಿದೆಯಪ್ಪಾ!

**ಪುರಾಣಿಕ:**— ಶಿವ, ಶಿವ ಶಿವ ಶಿವ ...... ಏನು ಸುಟ್ಟ ಚಳಿದಿವಸ ಗಳಪ್ಪಾ! ಈ ಅರಿಷ್ಟ ಚಳಿಗೆ ಹಗಲೂ ರಾತ್ರಿಯೂ ಒಂದೇ ಸಮ ... ಯಾರಿದು ಹಾದಿ ಮೇಲೆ? ನಂಜಣ್ಣನೇ ... ನಂಜಣ್ಣ, ಇಲ್ಲೇ ಯಾರೋ ನಿಂತಹಾಗೆ ಕಂಡಿತು — ದೂರ ದಿಂದ ...

**ನಂಜ:**— ಹೌದು ಸ್ವಾಮಿ, ಅವನು ನಮ್ಮ ತ್ಯಾಂಪು. ನಿಮ್ಮ ಮನೆ ಗೆಂತಲೇ ಹೊರಟಿದ್ದನು. ನಾನು, ನೀವು ಮನೆಗೆ ಬರಲು ಸ್ವಲ್ಪ ಹೊತ್ತಾದರೂ ಆದೀತು ಅಂದೆ.

**ಪುರಾಣಿಕ:**— ಹೌದಪ್ಪ ..... ಬರುವುದು ವೇಳೆಯಾಗುತಿತ್ತು. ಕೆರೆದಂಡೆ ಮೇಲೆ ಬಿಸಿಲಲ್ಲಿ ಎರಡು ಗಳಿಗೆ ಕುಳಿತಿದ್ದೆ. ಆದರೆ, ಅರಿಷ್ಟದ ಚಳಿ ಹೋಗಬೇಕೆ? ನೀರಲ್ಲಿಳಿಯಲಿಕ್ಕೆ ನಡುಕು ... ಇಂಥ ಅರಿಷ್ಟದ ಚಳಿ ಇಷ್ಟು ವರುಷವಿಲ್ಲ ... ಈ ವರುಷ ಎಲ್ಲಾ ವಿಪರೀತವೆಂತ ಕಾಣುತ್ತದೆ ... ಕಾಲಗತಿ!

**ನಂಜ:**— ಅಲ್ಲಾ ಸ್ವಾಮಿ, ಚಳಿ ತುಂಬಾ ಇದ್ದರೆ ಹೂವುಹಣ್ಣಿ ಗೊಳ್ಳೇದು ಎನ್ನುತ್ತಾರಲ್ಲ!

**ಪುರಾ:**— ಅದನ್ನು ಅಲ್ಲ ಅನ್ನುವವರಾರು! ಮಾವಿನ ಹೂವು ಈ ವರುಷ ಭಾರಿ ಆಗಿದೆ! ಆದರೆ ಎಲ್ಲೆಲ್ಲೂ ಚಳಿಯಾದರೆ ಅರ್ಥ ವೇನು? ಕೆರೆದಂಡೆಯಲ್ಲಿ ಯಾವ ಕರ್ಮಕ್ಕೆ ಚಳಿಯಾಗ ಬೇಕು? ಅಲ್ಲೇನು ಮಾವಿನ ಮರವಿದೆಯೆ? ಹೂಂ .. ಸ್ವಲ್ಪ ಆಚೆ ಸರಿ! ತಣ್ಣೀರು ಮಿಂದು ಬಂದುದಷ್ಟೆ .... ಇಲ್ಲೆಲ್ಲ ನೆರಳು ... (ಅವನು ನಿಂತಲ್ಲಿ ನಿಂತು) ಹೌದೋ, ನಂಜಪ್ಪ, ನಿನಗೆ ಚಳಿಯೇ ಆಗುವುದಿಲ್ಲವೇ? ನಿನ್ನ ಚರ್ಮ ದಪ ವೇನೋ?

**ನಂಜ:**— ಸ್ವಾಮಿ, ನನಗೇಕೆ ಚಳಿ ಆಗಬೇಕು? ತಣ್ಣೀರಲ್ಲಿ ಮುಣು ಗಲೂ ಇಲ್ಲ; ಅಲ್ಲದೆ ಮೈ ಮೇಲೆ ಇಷ್ಟು ದಪ್ಪದ ಕಂಬ ಳಿಯೂ ಇದೆ!

**ಪುರಾ:**— ಕಂಬಳಿ ಇದೆ! ಅದೇ ಕಾಣುತ್ತೇನೆ. ಮೇಲಿನ ವಸ್ತ್ರ ಕಂಡು ನನ್ನ ಹಾಗೇ ಇದ್ದೀ ಅಂತ ತಿಳಿದುಕೊಂಡೆ! ಈ ಚಳಿ ಗಾಲದಲ್ಲಿ ಮನುಷ್ಯ ಕುರಿಯಾಗಿ ಹುಟ್ಟಬೇಕು, ಕಾಣಯ್ಯ!

**ನಂಜ:**— ಕೋಣನಿಗೂ ಹಾಗೇ ಸ್ವಾಮಿ, ಅದಕ್ಕೆ ಚಳಿ ಎಂಬು ದಿದೆಯೇ? ಮುಖ್ಯ ಚಳಿಗಿಳಿಯೆಲ್ಲಾ ಮನುಷ್ಯರಿಗೆ . . . ಇರಲಿ, ಮನೆಗೆ ಹೋಗೋಣವೆ?

**ಪುರಾ:**— ನಮ್ಮ ಮನೆಗೇನು? ಏನಪ್ಪಾ ವಿಶೇಷ? ಏನಾದರೂ ಕೇವು ತಂದಿದ್ದೀಯಾ?

**ನಂಜ:**— ಅದೇನೋ ಕಟ್ಟಲೆ ಪ್ರಕಾರ ಇದ್ದೇ ಇದೆ. ಮನೆಯಲ್ಲಿ ನನ್ನಾಕೆಗೂ ನನಗೂ ಅಷ್ಟಷ್ಟೆ . . . ಹೀಗಾಗಿ ಏನು . . . ಕೇಳುವಾ ಅಂತ ಬಂದೆ . . . ತ್ಯಾಂಪನೂ ನಿಮ್ಮ ಮನೆಗೆಂದೇ ಹೊರಟದ್ದು. ಅವನಿಗಿಷ್ಟು ಗಾಳಿ ಹಾಕಿದರೆ ಒಂದು ಎರಡಾಣೆ ಕಾಸು ಸಿಗಲಿಕ್ಕೆ ಅಡ್ಡಿಯಿಲ್ಲ.

**ಪುರಾ:**— ಈ ದಿನದಲ್ಲಿ ಎರಡಾಣೆ ಕಾಸನ್ನು ಬಿಡುವ ಭೂಪ ಯಾರೋ ನಂಜ? ಇರಲಿ, ಅವನೇನು ನಮ್ಮ ಮನೆಗೆ ಹೊರ ಟದ್ದಂತೆ? ಹಾಗೆಲ್ಲ ಬಂದವನಲ್ಲ.

**ನಂಜ:**— ಏನೇನೋ ಅನ್ನುತ್ತಿದ್ದ ಸ್ವಾಮಿ. ಮಗುವಿಗೆ ಕಾಯಿಲೆ ಯಂತೆ. ದನಕ್ಕೆ ದೃಷ್ಟಿಯಾಗಿದೆಯಂತೆ. ಅಲ್ಲದೆ ಏನೋ ಬೆಳ್ಳಿನಗ, ಕಾಲಿನ ಪಾಡಗ, ಅಂದ ಹಾಗೆ ನೆನಪು, ಅದನ್ನು ಯಾರೋ ಕರೇ ಮುಸುಡಿನವರು ಕದ್ದುಕೊಂಡು ಹೋದರು

ಎಂದ. ಒಟ್ಟಾರೆ ಸ್ವಾಮಿ ಈ ದಿನಗಳಲ್ಲಿ ಕಳ್ಳತನ ಮಾತ್ರ ಬರಾಬ್ಬರಿ ಜಾಸ್ತಿ ಆದ ಹಾಗೆ ಕಾಣುತ್ತದೆ. ಯಾರಿಗೆ ಚಳಿ ಬಿಡದಿದ್ದರೂ ಈ ಕಳ್ಳರಿಗೆ ಚಳಿ ನಾಟುವುದಿಲ್ಲ ನೋಡಿ!

**ಪುರಾ:**— ಹಿಂದಿನ ಜನ್ಮದಲ್ಲಿ ಅವರು ಕುರಿಯೋ ಕೋಣವೋ ಆಗಿದ್ದಿರಬೇಕು.

**ನಂಜ:**— ಇದ್ದರೂ ಇರಬಹುದು. ಶಾಸ್ತ್ರ ಸುಳ್ಳೆನ್ನುತ್ತೀಯೋ?

**ಪುರಾ:**— ನೀನೇನೂ ಹೇಳು ನಂಜಪ್ಪ . . . ಶಾಸ್ತ್ರದ ಮಾತು ಸುಳ್ಳಾಗಬೇಕಾದರೆ ಆಕಾಶ ಭೂಮಿ ಒಂದಾಗಬೇಕು. ನಮ್ಮ ಹಿರಿಯರು ಮಾಡಿದ್ದೆಲ್ಲಾ ಸುಮ್ಮನೆಂದು ತಿಳಿದೆಯಾ? ಶಾಸ್ತ್ರ ಎಂದರೆ ಶಾಸ್ತ್ರವೇ! ಪುರಾಣ ಎಂದರೆ ಪುರಾಣವೇ! "ತ್ರಿಕಾಲಾಬಾಧಿತ" ಅನ್ನುತ್ತದೆ ಸ್ಮೃತಿ. ತ್ರಿಕಾಲ ಅಂದರೆ ಮೂರು ಕಾಲಕ್ಕೂ ನಿಜ ಎಂತ! ಒಂದು ಜೋತಿಷ್ಯ—ಅದನ್ನು ನೋಡು! ಏನು ಚಮತ್ಕಾರ ಅಪ್ಪಾ! ನಾಳೆಯೇನು ನಾಡಿದ್ದೇನು! ನಿನ್ನೇನು ಮೊನ್ನೇನು!—ಕಂಡದ್ದು ಕಂಡ ಹಾಗೆ ಅನ್ನುತದ್ದೆ. ಅಲ್ಲಯ್ಯಾ . . . ಮೊನ್ನೆ ನಾನು ಗುಣಿಸಿ ಪರಿಷ್ಕಾರಮಾಡಿ— ಆ ಶಿದ್ದಪ್ಪನಿಗೆ ಅಂದೆ— ನಿನ್ನ ಹೆಂಡತಿ ಉಳಿಯುವುದು ಹೇಗೋ ಅಂತ! ಅದೇ ಮೂರಣೇ ದಿನವೇ ಖಲಾಸ್!

**ನಂಜ:**— ಪುರಾಣಿಕರೇ! ಶಾಸ್ತ್ರವೂ ಹಾಗೇ, ನಿಮ್ಮ ಬಾಯಿಯೂ ಹಾಗೇ! ಹೂಂ, ಹೋಗುವ ಹೊತ್ತಾಯಿತು.

**ಪುರಾ:**— ಹೂಂ . . . ಚಳಿ . . . ಇಲ್ಲ ಬಿಟ್ಟಿತು. (ಮನೆಗೆ ತೆರಳುವರು.)

---

## ದೃಶ್ಯ ೩.

[ಪುರಾಣಿಕರ ಮನೆಯಲ್ಲಿ ಅವರು ಕವಡಿ ಹಿಡಿದು ತಯಾರಾಗಿರುವರು. ಎದುರು ನಂಜಪ್ಪನು ಕಾಸನ್ನು ಇಟ್ಟು ಪ್ರಶ್ನೆ ಕೇಳುತ್ತಿರುವನು]

**ಪುರಾಣಿಕ:**— ಕಷ್ಟಸ್ಯ ನಿಷ್ಠುರೇಚ್ಛೈವ ನಿಷ್ಟುರೋ ಕಷ್ಟಮೇವಚ – ಅಂತ ಹೇಳುತ್ತದೆ ನೋಡು. ಈ ಸ್ಥಾನವೆಂದರೆ ಶನಿ ವಕ್ರದಲ್ಲಿರುವ ಸ್ಥಾನ. ಈ ಕಡೆಯಲ್ಲಿ ರಾಹು . . ಈ ಕಡೆಯಲ್ಲಿ ಕೇತು. ಹೀಗೆ ಮೂರು ಸೇರಿ ನಿನ್ನನ್ನು ಕಾಡುವ ಹಾಗಿದೆ. ಆದುದರಿಂದಲೇ ಅದು ಹೀಗಾಗುವುದು!

**ನಂಜ:**— ನನಗೂ ಅದು ತಿಳಿದಿತ್ತು. ಶನಿ ಉಪದ್ರ ಅಲ್ಲದೆ ಹಾಗಾಗಲಿಕ್ಕೆ ಕಾರಣವಿಲ್ಲ. ಎಲ್ಲಿ ನೋಡಿದರೂ ಅಲ್ಲಿ ಹಾನಿಯೇ ಹೊರತು ಲಾಭವಿಲ್ಲ. ಒಂದು ಪೈ ಖರ್ಚಾಗುವಲ್ಲಿ ಒಂದಾಣೆ ವೆಚ್ಚವಾಗುತ್ತದೆ. ಸಾಲದುದಕ್ಕೆ ಮಾತಾಡುವಲ್ಲಿ ನಿಷ್ಠುರ. ಈಗ ಮನೆ ಒಳಗೂ ಮಾರಿ ಹೊಕ್ಕ ಹಾಗೆ ಆಗಿದೆ. ಏನಿಲ್ಲ— ಮೊನ್ನೆ ಅವಳು— ಈ ಹೊತ್ತಿನ ವರೆಗೆ ಪಿಟ್ಟೆಂದವಳಲ್ಲ, ಅವಳು, ನನ್ನ ವೆಂಕು, ಅವಳು ಮೈ ಮೇಲೆ ಸಿಡಿದುಬಿದ್ದು ಮಾತನಾಡಿದಳು. ಏನಿಲ್ಲ, ಈಗ ದಿನಕ್ಕೆ ಹದಿನೆಂಟು ಜಗಳ ಗಂಡ ಹೆಂಡಿರಲ್ಲಿ.

**ಪುರಾ:**— ನಾನು ಮತ್ತೇನೆಂದದ್ದು ನಿನಗೆ! ಕಷ್ಟಸ್ಯ ನಿಷ್ಠುರೋಚ್ಛೈವ– ಅಂದರೆ ಕಷ್ಟವಿದ್ದಲ್ಲಿ ನಿಷ್ಠುರವಿದೆ; ನಿಷ್ಠುರಸ್ಯ ಕಷ್ಟಮೇವಚ . ನಿಷ್ಠುರಸ್ಯ ಕಷ್ಟಮೇವಚಾ— ಅಂದರೆ ನಿಷ್ಠುರ ಇದ್ದಲ್ಲಿ ಕಷ್ಟ ಬರುತ್ತದೆ ಎಂದು. ನಿನ್ನ ಪಾಲಿಗೆ ಕಷ್ಟ ನಿಷ್ಠುರ ಎರಡೂ ೯ರಿ ಕಾಡುತ್ತದೆ. ಶನಿ, ರಾಹು, ಕೇತು! ಒಂದಲ್ಲ, ಎರಡಲ್ಲ ಮೂರು

ಮೂರು, ನಿನ್ನನ್ನು ಕಾಡುವಾಗ ಹೀಗಾಗುವುದು ಒಂದು ಆಶ್ಚರ್ಯವಲ್ಲ. ಅಂಥ ನಳರಾಯನಿಗೇ ಶನಿ ಕಾಡಿದಾಗ ದಮಯಂತಿ ದೂರಾದಳು! ದಮಯಂತಿ! ಖುದ್ದ ಅವನ ಕೈ ಹಿಡಿದ ಹೆಂಡತಿ, ನಳರಾಯನಿಗೆ! ಇನ್ನು ನಿನ್ನಂಥವನ ಅವಸ್ಥೆಯೇನು?

**ನಂಜ:**—ನಳರಾಯನಿಗಿಂತ ನಾನೊಂದೇನು ಹೆಚ್ಚು? ಆದರೆ ಪರಿಹಾರವೇನು, ಎಂದು ನಾನು ನಿಮ್ಮ ಹತ್ತಿರ ಕೇಳುವುದು. ಕಷ್ಟ, ನಷ್ಟ, ಭ್ರಷ್ಟ ಎಂತ ಹೀಗೆ ಹೆಜ್ಜೆ ಹೆಜ್ಜೆಗೂ ಆಗುತ್ತಾ ಇದ್ದರೆ ಎಷ್ಟು ದಿನ ಬದುಕಿರಲಿಕ್ಕೆ ಬಂದೀತು? ನೋಡಿ ಹೇಳಿ. ಏನಾದರೂ ಉಪಾಯ ನೀವು ತೋರಿಸಬೇಕು! ಇಗೊಳ್ಳಿ ನಿಮಗೆ ಶರಣು ಬಂದಿದ್ದೇನೆ. ನನ್ನ ಗ್ರಹಚಾರ ಶಾಂತಮಾಡಿಸಿದರೆ ಮುಂದೆ ಏನಾದರೂ ನಡೆದುಕೊಳ್ಳುತ್ತೇನೆ

**ಪುರಾ:**—ಅದು ನನಗೆ ಗೊತ್ತಿಲ್ಲದೆ ಉಂಟೆ? ನಂಜಪ್ಪನ ಗುಣ ನನಗೆ ತಿಳಿಯದೆ? . . . ಆಯ್ತು, ಇನ್ನು ಒಂದು ಮುಕ್ಕಾಲಿರಿಸು . . . ಪ್ರಶ್ನೆ ನೋಡುತ್ತೇನೆ. ಜಾತಕದ ವಿಚಾರ ಆಯಿತಲ್ಲ . . . ಅದಕ್ಕೆ ಹೇಗೂ ಪರಿಹಾರಮಾಡುವ. ಎಂಥಾ ರಾಹು ಕೇತು ಇದ್ದರೂ ತಕ್ಕ ಉಪಶಮನ ಮಾಡಲಿಕ್ಕೆ ಬರುತ್ತದೆ. ಕಾಳಭೈರವನ ಜಪಮಾಡಿದರೆ ಶನಿ ಅಲ್ಲ ಅವನಪ್ಪ ಆದಿತ್ಯನೂ ಪರಾರಿಯಾಗುತ್ತಾನೆ. ಆದರೆ ನಿನ್ನ ಕುಟುಂಬದ ಜಗಳ ನೋಡುವಾಗ ಸಂಶಯ ಕಾಣುತ್ತೆ!

**ನಂಜ:**—ನನಗೂ ಅದೇ ಸಂಶಯ. ಯಾಕಂದರೆ—ನೀವೇ ಮೂರು ಮೂರು ಸಾರಿ ಹೇಳಿದ್ದೀರಿ. ವೆಂಕು ಜಾತಕ, ನನ್ನ ಜಾತಕ ಅಂದರೆ ಹಾಲು ಮೊಸರು ಸೇರಿದ ಹಾಗೆ ಸೇರುತ್ತೆ ಅಂತ! ಈಗ ಹಾಲು ಮೊಸರು ಬಿಡಿ.—ಹಾಲು ಉಪ್ಪು ಆಗಿದೆ!

**ಪುರಾ:**— ನಿಮ್ಮಿಬ್ಬರ ಜಾತಕದ ಮಟ್ಟಿಗೆ ಹಾಗೆ ಸರಿ. ಬ್ರಹ್ಮ ಬಂದರೂ ನಿಮ್ಮ ಸ್ನೇಹ ತಪ್ಪಿಸುವುದಕ್ಕೆ ಸಾಧ್ಯವಿಲ್ಲ . . . ಆದರೆ, ಬೇರೆ ಏನಾದರೂ ಉಪದ್ರವಿದೆಯೋ ಅಂತ. ಮುಕ್ಕಾಲಿಸು . . . ಪ್ರಶ್ನೆ ಕಂಡು ಬಿಡುವ.

**ನಂಜ:**— ಏನೋ ಸ್ವಾಮಿ. ಯಾವುದಿದ್ದರೂ, ನೀವು ಬಿಟ್ಟು ಅನ್ಯ ದಾತರಿಲ್ಲ. ಒಂದು ಮುಳ್ಳು ಚುಚ್ಚಿದರೂ ನಾನು ನಿಮ್ಮಲ್ಲಿಗೇ ಓಡಿ ಬರುವವ. ಶರಣು ಅಂದಿದ್ದೇನೆ; ಮುಗಿಯಿತು.

**ಪುರಾ:**— ಆ ಮಾತು ನನಗೆ ಹೇಳಬೇಕೇನು? ನನ್ನ ಪ್ರಾಣ ಕೊಟ್ಟು ನಿನ್ನನ್ನು ಕಾಯಬೇಕಾದರೂ ನಾನು ಸಿದ್ಧನೇ . . . . ಆಯಿತಲ್ಲ . . . ಮುಕ್ಕಾಲಿಂಸು! ಸರಿ ನೋಡುವ . . . ಒಂದು ಸಂಖ್ಯೆ ಹೇಳು.

**ನಂಜ:**— ಮೂರು, ಅಲ್ಲ ಎಂಟು ......

**ಪುರಾ:**— ನೋಡಿದೆಯಾ? ಒಂದು ಸಂಖ್ಯೆ ಹೇಳು ಅಂದರೆ . . . . ಅಲ್ಲೂ ಗ್ರಹಗತಿ ನಿನ್ನ ಬಾಯಿ ಹಿಡಿಯುತ್ತೆ! ಇರಲಿ . . . . . ಇನ್ನೊಮ್ಮೆ ಹೇಳು . . . . ನಿಮ್ಮ ಮನೆ ಬಬ್ಬಯ್ಯನನ್ನು ನೆನೆದು ಒಂದು ಸಂಖ್ಯೆ ಹೇಳಿಬಿಡು.

**ನಂಜ:**— ಹನ್ನೊಂದು.

**ಪುರಾ:**— ಹನ್ನೊಂದೇ?

**ನಂಜ:**— ಅಲ್ಲ ಹನ್ನೆರಡು . . .

**ಪುರಾ:**— ಬೇಡ ಸುಮ್ಮನಿರು . . . . ಹನ್ನೊಂದೇ! ಹನ್ನೊಂದೆಂದರೆ ಹನ್ನೊಂದು . . . . ಹತ್ತು ಒಂದು . . . . ದಶಮು+ಏಕ. ದಶ ಕಂಠಸ್ಯ ದಶಮು — ದಶಮುದಲ್ಲಿ ಹತ್ತು ಕಂಟಕಗಳು. ಏಕ— ಏಕ ಎಂದರೆ ಏಕ–ಏಕೋ ದೇವಸ್ಮರೋ ನಿತ್ಯಂ . . . ಅಂತ—

ಒಂದು ದೈವನೋಡಯ್ಯ . . . ಒಂದೇ ದೈವದಿಂದ ದಶ ಕಂಟಕಗಳು ಬರುತ್ತವೆ ಎಂತ. ಅದು ಯಾವ ದೈವವಪ್ಪಾ . . . . ಇನ್ನೊಂದು ಸಂಖ್ಯೆ ಹೇಳಿಬಿಡು.

**ನಂಜ:**— ಏಳು.

**ಪುರಾ:**— ಏಳು . . . ೧, ೨, ೩, ೪, ೧,—೨,—೩, ೧,—೨,—೩, ಅಂದರೆ ಪೂರ್ವ, ದಕ್ಷಿಣ, ಪಶ್ಚಿಮ ಎಂತ. ಹೌದೋ ನಂಜಪ್ಪ ನಿನ್ನ ಮನೆ ಪಡುವಲಕ್ಕೆ ಯಾವ ದೈವದ ಗುಡಿಯಿದೆ? ಅದರಿಂದ ಇಷ್ಟೆಲ್ಲಾ ಆಗುತ್ತದೆ ಎಂತ ಕಾಣುತ್ತದೆ.

**ನಂಜ:**— ಪಡುವಿಗಿಲ್ಲ. ಬಡಕ್ಕಾದರೆ ಪಂಜುರ್ಲಿಯಿದೆ.

**ಪುರಾ:**— ಪಂಜುರ್ಲಿ ಇರಲಿ . . . . ಆದರೆ ಪಡುವಲಿಗೇನಾದರೂ ಇರಲೇ ಬೇಕು ನೋಡು

**ನಂಜ:**— ಪಡುವಲಿಗೆ ನಮ್ಮ ತ್ಯಾಂಪಣ್ಣನ ಮನೆ ಒಂದಲ್ಲದೆ ಬೇರೇನೂ ಇಲ್ಲ.

**ಪುರಾ:**— ಏನೋ ಅಪ್ಪ. ವಿಚಿತ್ರವಾಗಿ ಕಾಣುತ್ತದೆ. ಒಟ್ಟಾರೆ ಪಡುವಿನಿಂದ ಶುರುವಾದದ್ದು . . . ದೈವದ ಉಪದ್ರ . . . ದೈವ ಪಂಜುರ್ಲಿ ಎಂಬುದು ನಿಶ್ಚಯ. ನನ್ನ ಅಂದಾಜು . . . ಪಂಜುರ್ಲಿಯನ್ನು ಹಿಡಿದು ಆ ಪಡು ಮನೆಯವರು ಮಾಟಮಾಡಿದ್ದಾರೆ ಎಂದು!

**ನಂಜ:**— ಅಂದರೆ ತ್ಯಾಂಪಣ್ಣನೇ ಎಂದು ನೀವು ಹೇಳುವುದೇ?

**ಪುರಾ:**— ಅದನ್ನು ನಾನು ಹೇಗೆ ಅನ್ನಲಿಕ್ಕೆ ಬರುತ್ತದೆ? ಪಡುವಣ ದಿಕ್ಕಿನ ಮನೆ . . . ಮುಗಿಯಿತು. ಅಂತೂ ಏನೂ ಇರಲಿ, ನೀನೀಗ ಮನೆಗೆ ಹೋಗು. ನಾಳೆ ಬರುವ ಆದಿತ್ಯವಾರ ಬಾ. ಒಂದು ದರ್ಶನ ಮಾಡಿಸಿ ಕೇಳುವ . . . ಎಲ್ಲ ಪಂಜುರ್ಲಿ

ಬಾಯಿಯಿಂದಲೇ ಬಂದರೆ ಚಂದ. ಇಗೋ, ಈಗ ತತ್ಕಾಲಕೆ ಈ ಬೂದಿಯನ್ನು ಹಿಡಿದುಕೊಂಡು ಹೋಗಿ ಮನೆಗೆ ಕಾಲಿಡುತ್ತಲೇ ನಿನ್ನವಳ ತಲೆ ಮೇಲೆ ಎರಚು. ಮೊದಲಿಗೇ ಮಾತನಾಡಬೇಡ. ಎಲ್ಲಾ ಶಾಂತವಾಗುತ್ತೆ.

**ನಂಜ:**— ಹಾಗಾದರೆ ಹೊರಡಲೇ? . . . ಆದರೆ ಶನಿದೆಸೆಗೆ? . . .

**ಪುರಾ:**— ನೀನು ನಿತ್ಯ ಎಂಟು ದಿನ ಬೆಳಿಗ್ಗೆ ಎರಡೆರಡು ಪಾವು ಬೆಳ್ತಿಗೆ ಅಕ್ಕಿ, ಒಂದೊಂದು ಕಾಯಿ ನಮ್ಮನೆಯಲ್ಲಿರಿಸು . . . . ನಾನು ಅದಷ್ಟು ದೇವರಿಗೆ ಹೇಳಿಕೊಳ್ಳುತ್ತೇನೆ. ನಡಿ. ನಡಿ . . ಹೋದವನೇ ಅಷ್ಟು ಮಾಡು, ಮರೆಯಬೇಡ. ಎಲ್ಲಾದರೂ ಮರೆತುಗಿರತು, ಬೂದಿಯನ್ನು ನೆಲದ ಮೇಲೆ ಇರಿಸಬೇಡ! ತಿಳಿಯಿತೇ, ಅದು ಮಂತ್ರಿಸಿದ್ದು!

**ನಂಜ:**— (ಉದ್ದಂಡವೆರಗಿ) ಆಯಿತು ಬುದ್ಧಿ. ನಿಮ್ಮ ಅನುಗ್ರಹ. ಹೋಗುತ್ತೇನೆ, ಬುದ್ಧಿ. ಅಕ್ಕಿ ಕಾಯಿ ಬೆಳಿಗ್ಗೆ ನಸುಕಿಗೇ ಕೊಂಡುಬರುತ್ತೇನೆ. ಅದರ ಚಿಂತೆ ನಿಮಗೆ ಬೇಡ. ಅಂತು ಗ್ರಹಚಾರ ಒಂದನ್ನು ಪರಿಹಾರ ಮಾಡಿಕೊಟ್ಟರೆ ಸಾಕು. (ಹೋಗುತ್ತ) ಪಡು ದಿಕ್ಕಿನ ಮನೆ ಅಂದರೆ ಆವನದ್ದೇ ಆಯಿತು— ತ್ಯಾಂಪನದ್ದು—ಅವನೇ ಅಪ್ಪ. ಅಹುದು— ಬೇರೆ ಯಾರೂ ಇಲ್ಲ. ಪುರಾಣಿಕರೇನೋ ದಾಕ್ಷಿಣ್ಯಕ್ಕೆ ಹೆಸರು ಬೇಡವೆಂದು ಹಾಗೆ ಹೇಳಿದರು. ನಿಜಕ್ಕೂ ಅದು ತ್ಯಾಂಪಣ್ಣನೇ! ಅವನಿಗೆ ನಾವು ಗಂಡಹೆಂಡಿರು ಚಂದದಿಂದಿರುವುದು ಕಂಡು ಎಲ್ಲಿ ಸಹಿಸೀತು? ಮಾಟ ಮಾಡಿರಬೇಕು ಮುಂಡೇಗಂಡ. ಇನ್ನೊಮ್ಮೆ ಹಾದಿಯಲ್ಲಿ ನನಗೆ ಸಿಕ್ಕಲಿ. ಅವನ ಕಣ್ಣಿನ ನೆತ್ತರನ್ನೆಲ್ಲಾ ಇಳಿಸಿ ಬಿಡುತ್ತೇನೆ. (ತೆರಳುವನು.)

**ಪುರಾ:** — ಹರಿ, ಹರಿ, ಹರಿ, ಏನು ಸುಟ್ಟ ಚಳಿಯಪ್ಪ! ಹೊತ್ತು ಏರಿ ಮಧ್ಯಾಹ್ನವಾಯಿತು. ಹಸಿವೆಯೂ ಹಾಗೆ ಕಾಯಲಿಕ್ಕೆ ಶುರುವಾಯಿತು. ಇನ್ನು ಊಟಕ್ಕೆ ನಡೆಯುವುದು......ಛೆ ಮರೆತೇ ಬಿಟ್ಟೆ......ಆ ಸುಬ್ಬಣ್ಣ ಉಪಾಧ್ಯರಲ್ಲಿ ತಿಥಿ ಊಟಕ್ಕೆ ಹೇಳಿದ್ದರು......ಓ ಇವಳೇ! ['ಆಂ' ಎಂದು ಒಳಗಿನಿಂದ ಕೂಗಾಗುವುದು.] ಇವಳೇ! ಮಧ್ಯಾಹ್ನಕ್ಕೆ ಊಟಕ್ಕಿಲ್ಲ. ಉಪಾಧ್ಯರಲ್ಲಿ ಊಟಕ್ಕೆ ಹೇಳಿದ್ದಾರೆ. ಅಡಿಗೆಗಿಡಿಗೆ ಮಾಡಬೇಡ. (ಒಳಗಿನಿಂದ — "ಅಡಿಗೆ ಮಾಡಲಿಕ್ಕೆ ಇಲ್ಲಿ ಉಂಟೇನೆಂದು ಬೇಡವೇ?") ಛೇ...ಹೌದು...ಮರೆತೇ ಹೋಯಿತು, ಅಕ್ಕಿ ತಂದು ಹಾಕಲೇ ಇಲ್ಲ. ಈ ಎರಡು ಮುಕ್ಕಾಲನ್ನು ತೆಗೆದುಕೊಂಡು ಏನಾದರೂ ತರಲೇ? ಆ ತ್ಯಾಂಪ ಬಂದರೆ ಎರಡಾಣೆ ಕಾಸು ಕೇಳುವಾ ಎಂದು ಕಾದರೆ ಅವನೂ ಬರುವ ಹಾಗಿಲ್ಲ..... ಹಾಳಾಯಿತು. ನಾಳೆಯಿಂದಾದರೆ ಎಂಟು ದಿನದ ವರೆಗೆ ತಂಟೆಯಿಲ್ಲ......ಬಂದ ಪುಣ್ಯಾತ್ಮ!

(ತ್ಯಾಂಪಣ್ಣನ ಪ್ರವೇಶ.)

**ತ್ಯಾಂಪ:** — ಅಡ್ಡ ಬಿದ್ದೆ, ಬುದ್ಧಿ. ಎಲ್ಲೋ ಹೊರಡಲಿಕ್ಕೆ ನಿಂತ ಹಾಗೆ ಕಾಣುತ್ತದೆ...ನಾನು ಬಂದದ್ದು ವ್ಯರ್ಥವಾಯಿತೋ... ಅಯ್ಯೋ ನನ್ನ ಹಣೆಯ ಬರಹವೇ!

**ಪುರಾ:** — ಛೆ . . . ಏನು ಕೆಲಸವಿದ್ದರೂ ನಿನ್ನನ್ನು ಬಿಟ್ಟು ಅಲ್ಲ . . . ಕುಳಿತುಕೋ . . . ಏನು ವಿಶೇಷ, ಏನು ಕಥೆ . . . ಮನೆಯಲ್ಲೆಲ್ಲಾ ಕ್ಷೇಮತಾನೇ?

**ತ್ಯಾಂಪ:** — ಏನು ಕ್ಷೇಮವೋ ದೇವರೇ ಬಲ್ಲ . . . ನೋಡಿ, ಯೋ

5

ಚನೆ ಹಿಡಿದು ನಾನು ಕುಸಿದು ಕಡ್ಡಿಯಾದೆ . . . ಈಗ ಒಂದು ಪ್ರಶ್ನೆ ಕೇಳುವ ಎಂದು ಬಂದೆ.

**ಪುರಾ:**—ಒಂದು ಮುಕ್ಕಾಲಿಡು!

**ತ್ಯಾಂಪ:**— ಇಗೊಳ್ಳಿ, ಅಲ್ಲಿ ಮುಂದಿರಿಸಿದೆನಲ್ಲಾ.

**ಪುರಾ:**—ಹಾಂ . . . ಕಾಣಲೇ ಇಲ್ಲ . . . ಇರಲಿ, ಒಂದು ಸಂಖ್ಯೆ ಹೇಳು.

**ತ್ಯಾಂಪ:** – ಆರು.

**ಪುರಾ:**—೧, ೨, ೩, ೪, ೫, ೬ ಅಂದರೆ ಷಷ್ಠ . . . ಷಷ್ಠಮಂ ನಷ್ಟ ಕಾರಣಂ . . . ಏನೋ ನಷ್ಟವಾಗಿದೆ.

**ತ್ಯಾಂಪ:**—ಅದಕ್ಕಾಗಿ ಕೇಳುವಾ ಎಂದು ಬಂದೆ.

**ಪುರಾ:**—ಆಯಿತು ಹೇಳುತ್ತೇನೆ . . . ಆರು . . . ಆರರಲ್ಲಿ ಎರಡು ಕಳೆದರೆ ನಾಲ್ಕು . . . ನಾಲ್ಕು ಅಂದರೆ ಬ್ರಹ್ಮ, ಕ್ಷತ್ರಿಯ ವೈಶ್ಯ, ಶೂದ್ರ . . . ಎಂದು. ಬ್ರಾಹ್ಮಣೇ ಮುಖಮಾಸೀತು . . . ಪಾದೋ ಶೂದ್ರೋಭಿಜಾಯತೇ . . . ಅಂದರೆ ಪಾದ . . . ಕಾಲಿಗೆ ಹಾಕುವಂಥದ್ದು. ಬಿಳೇದಿರಬಹುದು, ಅಲ್ಲವೇ . . . ಕಾಲು ಚಿನ್ನವೆನೋ ಕಳವಾಗಿರಬೇಕು.

**ತ್ಯಾಂಪ:**—ಅಯ್ಯೋ ದೇವರೇ! ನಾನು ಮೊದಲೇ ಇಲ್ಲಿಗೆ ಬರಬೇಕಿತ್ತು. ಕಂಡದ್ದು ಕಂಡ ಹಾಗೆ ಹೇಳುತ್ತಾರೇ ಇವರು! ನನಗೆ ಗೊತ್ತಿತ್ತು ಪುರಾಣಿಕರ ಯೋಗ್ಯತೆ. ಆದರೆ ಬರಲಿಕ್ಕೆ ಹಾಳಾದ ಹಣೆಬರಹ ಬಿಡಬೇಕಲ್ಲ! . . . ಸ್ವಾಮಿ ನೀವೆಂದದ್ದು ನಿಜ . . . ನನ್ನ ಹೆಂಡತಿಯ ಕಾಲುನಗ ಕದ್ದುಹೋಗಿದೆ . . . ಯಾರು ಎಂದು ತಿಳಿಸಿದರೆ . . .

**ಪುರಾ:** – ಹೇಳುವ . . . ೬ ಅಂದೆಯಲ್ಲಾ . . . ಒಂದು ಕಳೆದರೆ

೫.. ೬ರಿಂದ ೫ಕ್ಕೆ ಗುಣಿಸಿದರೆ ೩೦... ಅಂದರೆ ಅವು ವಾಸ್ಯೆ... ಕಪ್ಪು ಎಂದು ಕಾಣುತ್ತದೆ... ಕಪ್ಪು ಜನ... ಆ ದಿನ ನಿನ್ನ ಮನೆಗೆ ಯಾರಾದರೂ ಕಪ್ಪು ಮುಖದವರು ಬಂದಿದ್ದರೇನಯ್ಯಾ?

**ತ್ಯಾಂಪ:**— ದೇವರಾಣೆ ಬುದ್ಧಿ.... ಒಬ್ಬ ಕರೇ ಮುಸುಡಿನವ ... ನನಗೂ ಅವನೇ ಎಂದು ನಿಶ್ಚಯವಿತ್ತು...

**ಪುರಾ:**— ಆಯಿತಲ್ಲ ಒಂದು ವಿಚಾರ... ಇನ್ನೇನು ಬೇಕು ಹೇಳು ... ಅಂದರೆ ಒಂದು ಚಿಕ್ಕ ಬ್ರಾಹ್ಮಣಾರ್ಥಕ್ಕೆ ಹೋಗುವುದಿದೆ; ಹೊತ್ತಾಯಿತು.

**ತ್ಯಾಂಪ:**— ಆಯಿತು ದೇವರು. ಇದೊಂದು ಜಾತಕದ ಚೂರನ್ನು ಕಂಡಿದ್ದರೆ, ಏನು ನನ್ನ ಹಣೆಬರಹ ಎಂದು ಓದಿ ಹೇಳಿದ ಹಾಗೆ ಆಗುತ್ತಿತ್ತು. ಅಷ್ಟು ಮಾಡಿಸಿ.

**ಪುರಾ:**— ತ್ಯಾಂಪ... ಜಾತಕದ ಕೆಲಸ ಅವಸರದಲ್ಲಿ ಮಾಡಬಾರದು. ಅವಸರದಲ್ಲಿ ಮಾಡಿ ಅಂಥ ಭಾಸ್ಕರಾಚಾರ್ಯನ ಮಗಳೇ ಮುಂಡೆಯಾದಳು. ಅದನ್ನು ಪುರುಸತ್ತಿನಲ್ಲಿ ನೋಡಿ ಹೇಳುತ್ತೇನೆ. ಈಗ ಪ್ರಶ್ನೆ ಏನಾದರೂ ಕೇಳಿದರೆ ಮಣೆ ಕವಡೆಯಿಟ್ಟು ನೋಡುವ.

**ತ್ಯಾಂಪ:**— ಆಯಿತು ತಾವು ಅಂದ ಹಾಗೆ... ಅಂದರೆ ಮನೆಯಲ್ಲಿ ತಾಪತ್ರಯ ಒಂದಲ್ಲ ಎರಡಲ್ಲ... ಮಗು ಕಾಯಿಲೆ! ಜ್ವರ, ಕೆಮ್ಮು ಅಂದರೆ ಅಷ್ಟಿಷ್ಟಲ್ಲ. ಇತ್ತ ದನ ಒಂದು ತೊಟ್ಟು ಹಾಲು ಕೊಡುವುದಿಲ್ಲ... ಅಷ್ಟೆಯೇ?... ಈ ವರ್ಷದ ಬೆಳೆಯ ಅವಸ್ಥೆ ಹೇಳಿದರೆ ಏನೇನೂ ಸ್ವಾರಸ್ಯವಿಲ್ಲ... ಏನು ನನ್ನ ಗ್ರಹಚಾರವೆಂದು ಇಷ್ಟು ಬಡಿಸಿದ್ದರೆ?...

**ಪುರಾ:**— ಆಯಿತು . . . ಒಂದು ಮಗು, ಒಂದು ದನ, ಒಂದು ಹೊಲ ಅಂತಿಟ್ಟುಕೋ ಮೂರು ಪ್ರಶ್ನೆ . . . . ಮೂರು ಪಾವಾಣೆಗಳನ್ನಿರಿಸು.

**ತ್ಯಾಂಪ:**— ಚಿಲ್ಲರೆ ಇಲ್ಲ. ಎರಡಾಣೆ ಪಾವಲಿ ಮಾತ್ರ ಇದೆ.

**ಪುರಾ:**— ಅದನ್ನೇ ಇಡು, ಹೇಗೂ ನಾಳೆಗೆ ಜಾತಕಕ್ಕೆ ಕೊಡುವುದು ಇದೆ . . . ಇಡು . . ಇಡು . . ಈಗ ಮಗು . . . ಮಗುವಿಗೆ ಕಾಯಿಲೆ. (ಗುಣಿಸಿ, ಕೂಡಿಸಿ, ಕಳೆದು . . . ) ತೀಕ್ಷ್ಣ ಕಾಯಿಲೆ . . . ಆಯುಷ್ಯ ಏನೋ ಸಂಧಿಯಲ್ಲಿದೆ. ಬದುಕಿದರೆ ಬದುಕಬಹುದು. ಅಷ್ಟೆ. ಇನ್ನೊಂದು ದನ ಅಂದೆಯೊ? . . . ಗೋಬ್ರಾಹ್ಮಣ ಹಿತಾಯಚ ಅಂತ ಶಾಸ್ತ್ರ . . . ಗೋವು–ಅದಕ್ಕೂ ಏನೋ ಕಂಟಕ ಬಂದ ಹಾಗೆ ಕಾಣುತ್ತದೆ . . . ಹಾಲುಕೊಡುವುದನ್ನು ಬಿಡು . . . ಅದು ಉಳಿಯುವುದೇ ಕಷ್ಟ. ಇನ್ನು ಹೊಲದ ವಿಚಾರ (ಗುಣಿಸಿಕೊಂಡು) ಇದಕ್ಕೆ ಇಷ್ಟಕ್ಕೂ ಹೆಚ್ಚಿನ ಕಷ್ಟ ನಿಂತಿದೆ . . . ಇದು ಭೂತದ ಉಪದ್ರವೇ ಸರಿ. ಏನು ಹತ್ತಿರದ ಭೂತದ ಕಲ್ಲು ತಲೆ ಕೆಳಗಾಯಿತೋ ಏನೋ! ಭೂತವೇ ಅಪ್ಪ . . . ಅಲ್ಲದಿದ್ದರೆ ಹಾಗಾಗಲಿಕ್ಕಿಲ್ಲ. ಮರ್ಕಟಸ್ಯ ಸುರಾಪಾನಂ ಮಧ್ಯೇ ವೃಶ್ಚಿಕತಾಡನಂ । ತನ್ಮಧ್ಯೇ ಭೂತ ಸಂಚಾರಂ ಯದ್ವಾ ತದ್ವಾ ಭವಿಷ್ಯತಿ ॥ ಭೂತ ಸಂಚಾರದಿಂದ ಯದ್ವಾ ತದ್ವಾ ಆದೀತು ಎಂದು ಕಾಣುತ್ತದೆ.

**ತ್ಯಾಂಪ:**— ಅಯ್ಯೋ ನನ್ನ ಹಣೆಬರಹವೇ! ಕೊನೆಗೂ ಏನು ಗತಿ! ಬ್ರಹ್ಮನು ಹೀಗೆಲ್ಲಾ ನನ್ನ ಹಣೆಯಲ್ಲಿ ಬರೆಯಬೇಕೇ! ಏನು ಉಪಶಮನ ಹೇಳುತ್ತೀರಿ?

**ಪುರಾ:**— ತ್ಯಾಂಪ . . . ಮೂರು ಮೂರು ಉಪದ್ರಗಳಿರುವಾಗ

ಸಾಧಾರಣದಲ್ಲಿ ಉಪಶಮನ ಹೇಳಲಿಕ್ಕೆ ಬರುತ್ತದೆಯೋ? ನಾಳೆ ಬಾ. . . ಜಾತಕವನ್ನು ಹೇಗೂ ಕೊಟ್ಟಿರುವಿ; ಎಲ್ಲಾ ಚಂದವಾಗಿ ಗುಣಿಸಿ ಸ್ಫುಟಮಾಡಿ ಹೇಳುತ್ತೇನೆ. ಏನೂ ಹೆದರಿಕೆ ಬೇಡ ನಿನಗೆ.

(ಒಳಗಿನಿಂದ ಅವರ ಮಡದಿ 'ಅಲ್ಲ, ಉಪಾಧ್ಯರ ಮನೆಗೆ ಹೋಗುವವರು ಹೊತ್ತುಮಾಡಿ ಹೋಗುತ್ತೇರೆಂದ್ರೆ ಅಲ್ಲಾರು ನಿಮಗೆ ಕಾದಿರುತ್ತಾರೆ?' ಎಂದು ಕರೆದು ಹೇಳುತ್ತಾಳೆ.)

**ಪುರಾ:**— ಹೌದೋ ತ್ಯಾಂಪ . . . ಹೊತ್ತಾಯಿತು! ಇರಲಿ, ಬೆಳಿಗ್ಗೆ ಬಾ. ನಿನಗಾಗಿ ನಾನು ಕಾದಿರುತ್ತೇನೆ ಬಂದು ಬಿಡು. ಇವಳೇ, ಇವಳೇ! ಇಲ್ಲಿ ಮಣೆ ಮೇಲೆ ೨॥ ಆಣೆ ಕಾಸಿದೆ. ತೆಗೆದಿರಿಸಿ ಬಿಡು . . . ಈ ಹೊತ್ತಿನ ಮಟ್ಟಿಗೆ ಅಕ್ಕಿ ಆಚೆಮನೆಯಿಂದ ಕಡ ತಂದುಬಿಡು. ಶಿವ ಶಿವ ಶಿವ ಶಿವ— (ತೆರಳುವನು)

**ತ್ಯಾಂಪ:**— ನಾನು ಮೊದಲೇ ಅಂದಿದ್ದೆ . . . . ಹಣೆಬರಹ ಇದು ಎಂದು! ಬ್ರಹ್ಮ ಬರೆದದ್ದು ಅಷ್ಟು ಬಲವಾಗಿರದಿದ್ದರೆ ಕೈಗೆ ಸಿಕ್ಕಿದ ಪುರಾಣಿಕರು ತಪ್ಪುತ್ತಿದ್ದರೇನು? ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ ಎನ್ನುತ್ತಾರಲ್ಲ ಹಾಗಾಯಿತು ನನ್ನ ಅವಸ್ಥೆ . . . ಅಯ್ಯೋ, ಸುಳ್ಳಲ್ಲ . . . ಸುಳ್ಳಲ್ಲ!

"ಯಾರೇನು ಮಾಡುವುದು ವಿಧಿ ಬೆನ್ನಬಿಡದು."

---

## ದೃಶ್ಯ ೪.

[ಹಾದಿಯಲ್ಲಿ ನಂಜಪ್ಪನು ಕಾದುನಿಂತಿರುವನು. ತುಸುಹೊತ್ತಿನಲ್ಲಿ ಬೇಸರದಿಂದ ಮನೆಗೆ ಹೋಗುತ್ತಿರುವ ತ್ಯಾಂಪಣ್ಣನು ಅವನಿಗೆ ಸಿಗುವನು.)

**ನಂಜ:**—ಅರೇ! . . . ಇವನಿಗಾಗಿ ಕಾದುಕುಳಿತರೆ ಇವನು ಬರುವುದೇ ಇಲ್ಲ. ಏನು ಮಾಡಲಿ? ಮನೆಗೆ ನೇರಾಗಿ ಹೋಗಿಬಿಡಲೇ? ಇಲ್ಲ, ಅವನಲ್ಲಿ ಒಂದು ಮಾತನ್ನು ಕೇಳಿಯೇ ಹೋಗಿಬಿಡುತ್ತೇನೆ. ಆದರೆ ಬಾಯಿ ತೆರೆದೊಡನೆಯೇ ಜಗಳವಾದರೆ ಅದೂ ಕಷ್ಟ. ಜಗಳವಾದರೆ ಆಗುತ್ತದೆ . . ನಮ್ಮ ಸಂಸಾರವನ್ನು ಕಂಡು ಅವನು ಮಾಟ ಮಾಡತೊಡಗಿದ ಮೇಲೆ . . . ಅವನ ಹಂಗು ನನಗಿದೆಯೇ? ಆದರೂ ಅವನೇ ಮಾಟ ಮಾಡಿದನೆಂಬುದು ಏನು ನಿಜ? ಬೇಡ, ತಣ್ಣಗೆ ಮನೆಗೆ ಹೋಗುತ್ತೇನೆ. ಇಲ್ಲ, ಹೇಗೂ ಕಾದು ಕುಳಿತಾಯಿತು. ಅವನನ್ನು ಕಂಡು ಮಾತನಾಡುತ್ತೇನೆ. ಚಂದವಾಗಿ ನಿಷ್ಠುರವಿಲ್ಲದೆ ಮಾತನಾಡುತ್ತೇನೆ. ಇಷ್ಟು ದಿನ ನನಗೂ ಅವನಿಗೂ ಜಗಳವಾಗಿದೆಯೇ?

**ತ್ಯಾಂಪ:**—(ಆ) ಇಲ್ಲ, ನಾನು ನಾಳೆಗೆ ಅವರ ಮನೆಗೆ ಹೋಗುವುದಿಲ್ಲ. ಯಾವ ಕರ್ಮಕ್ಕೆ ಹೋಗುವುದು? ಅವರು ಸಿಕ್ಕುವುದೂ ಕಷ್ಟ. ಸಿಕ್ಕಿದರೂ ಇನ್ನೇನಾದರೂ ತೊಂದರೆ ಬರುವುದಿಲ್ಲ ಎಂಬುದು ನಿಶ್ಚಯುವೇ? ಹಣೆಯುಲ್ಲಿ . . . ಅರೇ, ಇದೇನು ನಂಜಪ್ಪ ಬೀದಿಯುಲ್ಲಿ ಭೂತದ ಹಾಗೆ ನಿಂತಿದ್ದಾನೆ! ಕರೆಮುಸುಡಿ ನವನೆಂವರಲ್ಲಾ . . . ಇವನೇ . . . ಮತ್ತಾರು? ಮತ್ತಾರಿಗೆ ಕರೇ ಮುಸುಡಿದೆ? ಕೇಳಿಯೇ ಬಿಡುತ್ತೇನೆ. ಹೇಗೂ ಕೆಟ್ಟ

ದ್ದೇನೆ. ಇನ್ನು ಯಾರಿಗೆ ಅಂಜಬೇಕು? . . . (ಪ್ರ) ಹೌದೊ ನಂಜ?

**ನಂಜ:**— ನಂಜ!

**ತ್ಯಾಂಪ:**— ಏನು, ನಂಜನಲ್ಲವೊ ನೀನು?

**ನಂಜ:**— ಏನು ನಂಜ, ಏನು ಪುಂಜ! ನಂಜಪ್ಪ ಅನ್ನುತ್ತಿದ್ದವನು ಒಮ್ಮೆಗೇ ನಂಜ ಎಂದು ಶುರುಮಾಡಿದೆ?

**ತ್ಯಾಂಪ:**— ಹೋಗಯ್ಯ . . . . ನಂಜಪ್ಪ ಅನ್ನಬೇಕಂತೆ ಇವನನ್ನು! ನಂಜಪ್ಪ! ದೊಡ್ಡ ಮೈಸೂರು ರಾಜ ಇವನು. ಡೌಲಿಗೇನು ಕಡಿಮೆಯಿಲ್ಲ. ಮಾಡುವ ಕೆಲಸಮಾತ್ರ ಕಳ್ಳ ಬೊಗ್ಗುವಿನದು!

**ನಂಜ:**— ಬೊಗ್ಗು! ಯಾರಿಗೆಂದೆ ನೀನು ಆ ಮಾತನ್ನು?

**ತ್ಯಾಂಪ:**— ಯಾರಿಗಂದರೆ, ಯಾವ ಕರೆ ಮುಸುಡಿನವ, ನನ್ನ ಮನೆ ಪಾಡಗ ಕದ್ದನೋ, ಅವನಿಗೆ!

**ನಂಜ:**— ಕರೆ ಮುಸುಡಿನವ, ನಿನ್ನ ಮನೆಯ ಪಾಡಗ ಕದ್ದ ಎಂತ ಬಾಯಿ ಬಿಡುತ್ತೀಯಾ? ನನ್ನನ್ನು ಕಂಡು ಹಾಗೆ ಅಂದಿದ್ದೀಯಾ? ಇಂದು ಬೆಳಗ್ಗೆ ಹಾಗೇ ಅಂದಿದ್ದೆ. ಅಯ್ಯೋ, ನನ್ನ ಹೆಡ್ಡ ಬುದ್ಧಿಗೆ ಅದು ತೋಚದೆ ಹೋಯಿತಲ್ಲಾ . . . ಏನು ಧೈರ್ಯವೋ ನಿನ್ನದು? ಕರೆ ಮುಸುಡಿನವ ಎಂದು ಅನ್ನಲಿಕ್ಕೆ ಯಾವ ಸುಟ್ಟ ಸುಂದರ ಪುರುಷನೋ ನೀನು? ನಿನ್ನ ಮನೆ ಪಾಡಗ ಕದಿಯಲಿಕ್ಕೆ ನಾನು ಬರುತ್ತೇನೆಯೋ? — ಬೇಡ . . . ನಡಿ . . . ಇಲ್ಲ, ನಾನು ಮಾತಾಡಬಾರದು . . . ನಿಷ್ಠುರದ ನಾಲಗೆ ನನ್ನದು!

**ತ್ಯಾಂಪ:**— ಭಾರಿ ಸಂಭಾವಿತನು ನೀನು! ಗೊತ್ತು. ಆ ದಿನ ಬೆಳಿಗ್ಗೆ ಕೊಡಲಿ ಬೇಕು ಎಂದು ನೆಪಮಾಡಿ, ಕೋಳಿಕೂಗುವ ಮುಂಚೆ ಕಾಲಿಟ್ಟು, ಮಧ್ಯಾಹ್ನದ ತನಕ ನನ್ನ ಮನೆಯಲ್ಲಿ ಗೂಬೆ ಹಾಗೆ

ಕಾದಿದ್ದು, ನನ್ನ ಅಂಗಳವನ್ನೆಲ್ಲಾ ಎಲೆ ಅಡಿಕೆ ತಿಂದು ಪೀಕ ದಾನಿ ಮಾಡಿಟ್ಟು . . .

**ನಂಜ:**—ಆಯಿತೇ, ಇಷ್ಟೇ ಸರಿಯೇ! ಕೋಳಿಯಾಯಿತು, ಗೂಬೆ ಯಾಯಿತು, ಪೀಕದಾನಿಯಾಯಿತು . . . ಬೇಕು ಬೇಕು ಎಂದು ಸಂಟರ ಮನೆ ಸುದ್ದಿ ತೆಗೆದು, ನನ್ನನ್ನು ಹೊತ್ತೇರುವ ತನಕ ಕುಳ್ಳಿರಿಸಿಕೊಂಡು ಈಗ ಹ್ಯೊಮಾಲೆಯನ್ನು ನನ್ನ ಕೊರಳಿಗೆ ಹಾಕುತ್ತಿಯಾ? ದೇವರ ಆಣೆಹಾಕಿ ನಾನು ನಿನ್ನ ಪಾಡಗ ಕದ್ದದ್ದು ಅನ್ನುತ್ತಿಯಾ? ಪ್ರಮಾಣಮಾಡುವ ದೇವರ ಹತ್ತಿರ . . .

**ತ್ಯಾಂಪ:**—ದೇವರ ಹತ್ತಿರ ಪ್ರಮಾಣಮಾಡುವುದಂತೆ! ಏನೂ ಮಾಡುವೆ. ಅಷ್ಟಿದೆ ನಿನ್ನ ಧೈರ್ಯ! ಯಾವ ಮುಹೂರ್ತ ದಲ್ಲಿ ನಿನ್ನ ಅರಿಷ್ಠ ನನ್ನ ಮನೆಗೆ ಕಾಲಿಟ್ಟಿತೋ ಮಗು ಹಾಸಿಗೆ ಹಿಡಿಯಿತು, ದನವಂತೂ ನಿನ್ನ ಕಣ್ಣುತಾಗಿ ಹಾಲಿನ ಹನಿ ಇಳಿಸು ವುದಿಲ್ಲ.

**ನಂಜ:**—ಇದು ವಿಪರೀತವಾಯಿತು. ಸುಮ್ಮನೆ ಇದ್ದರೆ ನಾಲಿ ಗೆಗೆ ತೆರವು ಇಲ್ಲದಂತೆ ಬೊಗಳುತ್ತಿಯಾ? ಇನ್ನೊಮ್ಮೆ ನೀನು ಅದೇ ಮಾತನ್ನು ಅಂದದ್ದಾದರೆ ನಿನ್ನ ಹಲ್ಲನ್ನು ಕಿತ್ತು ಕೈಯಲ್ಲಿ ಕೊಡುತ್ತೇನೆ! ನಮ್ಮ ಗಂಡಹೆಂಡಿರಲ್ಲಿ ಜಗಳ ಆಗಲಿ ಎಂದು ಮಾಟಮಾಡಿದು ಸಾಲದೆ ನನ್ನ ಕೊರಳಿಗೆ ಕಳ್ಳಗಿಳ್ಳ ಎಂದು ಬಿರುದು ಹಚ್ಚಿದರೆ—ನಿನ್ನ ಸುದ್ದಿ ಅಡಗಿಸಿಬಿಡುತ್ತೇನೆ! . . . ಇನ್ನು ತ್ಯಾಂಪಣ್ಣ ಎನ್ನುವವ ಹುಟ್ಟಲಿಲ್ಲ ಎಂದು ಮಾಡುತ್ತೇನೆ! ನೋಡು, ತೆಗಿ ಇನ್ನೊಮ್ಮೆ ಬಾಯಿ! . . . ನಿನ್ನ ಕೈಕಾಲು ಮುರಿದು . . .

**ತ್ಯಾಂಪ:**—ಏನು, ನನ್ನ ಕೈಕಾಲು ಮುರಿದು . . . ನನ್ನ ಕೈಯ

ಮೇಲೆ ದೇವರು ಕೂತಿದ್ದಾನೆಯೋ . . . ಬಾ . . . ಆಗಿಹೋಗಲಿ ಒಂದು ಕೈ . . .

**ನಂಜ:**—(ಮುಂದರಿದು) ಆಗಲಿ, ಇದೋ ಈ ಚೂರಿಯಿಂದ ನಿನ್ನ ಎದೆ ಸಿಗಿದು ನಿನ್ನ ಕರುಳನ್ನು ನಿನ್ನ ಕೊರಳಿಗೆ ಸುತ್ತದಿದ್ದರೆ ನಾನೇಕೆ?

**ತ್ಯಾಂಪ:**— ದಮ್ಮಯ್ಯ, ನನ್ನನ್ನು ಕೊಲ್ಲಬೇಡವೋ! . . .

**ನಂಜ:** — ಇನ್ನು ಬೊಗಳುತ್ತೀಯಾ ಹಾಗೆ? . . .

**ತ್ಯಾಂಪ:**— ಇನ್ನು ಅಂದರೆ ನಾ ನಿನ್ನ ಮಗ . . .

**ನಂಜ:** — ಹೂಂ, ಹಾಳಾಗು . . . ಸಾಯಿ (ತೆರಳುವನು.)

**ತ್ಯಾಂಪ:**— ಅಯ್ಯೋ, ನನ್ನ ಹಣೆಬರಹದಲ್ಲಿ ಇಷ್ಟೆಲ್ಲಾ ಬರೆಯಬೇಕೆ!

---

## ದೃಶ್ಯ ೫.

[ನಂಜಪ್ಪನ ಮನೆಯಲ್ಲಿ ಅವನ ಹೆಂಡತಿ ವೆಂಕುವು ಅಡಿಗೆಮಾಡಿ ಗಂಡನಿಗಾಗಿ ಕಾದುಕುಳಿತಿರುವಳು.]

**ವೆಂಕು:**—ಇವರಿಗೆ ದಿನೇ ದಿನೇ ಹೊಸ ಅವತಾರವೇ ತೊಡುಗುತ್ತದೆ ಎಂದು ಕಾಣುತ್ತದೆ. ಮೊನ್ನೆ ಇಡಿ, ತಲೆನೋವು ಎಂದು ಬಿದ್ದು ಕೊಂಡಿದ್ದರೆ ಕಾಟಕೊಟ್ಟು ಜೀವತಿಂದರು. ಅದನ್ನು ಎಣಿಸಿದರೆ ನನಗೇ ಬೇಸರಆಗುತ್ತದೆ: ನಾನು ಎಷ್ಟೆಂದರೂ ಆ ಮಾತನ್ನು ಅನ್ನಬಾರದಿತ್ತು. "ನಿಮಗೇನು ಸಂಕಟ?" ಅಂದೆನಲ್ಲ . . . ಪಾಪ! ಏನು ತಿಳಿದುಕೊಂಡರೋ ಏನೋ. ಆದರೆ ಮಾಡುವು ದೇನು? ಮೈಸುಖವಿಲ್ಲದಾಗ ಆ ರೀತಿ ಜೀವವನ್ನು ತಿಂದರೆ, ಬಾಯಿ ಸುಮ್ಮನಿರುತ್ತದೆಯೆ?

ಇವತ್ತು ಹೊತ್ತು ತಿರುಗಿ ಇಷ್ಟು ಹೊತ್ತಾದರೂ ಸವಾರಿಯೇ ಕಾಣೆ. ಕೆಲಸಕ್ಕೆಂತೂ ಹೋಗಲಿಲ್ಲ. ಕೋಣಗಳು ಇಲ್ಲೇ ಇವೆ; ಹಾರೆಗುದ್ದಲಿಗಳೂ ಇಲ್ಲಿವೆ. ಏನು ಊರು ಅಳೆಯು ಲಿಕ್ಕೆ ಹೊರಟರೋ? ಹೂಂ, ಬಂತು ಸವಾರಿ. (ನಂಜಪ್ಪನು ಬರುವನು.) ಏನು ಇವತ್ತು ಸವಾರಿಯು ಶ್ಯಾನುಭೋಗಿಕೆಯನ್ನು ವಹಿಸಿಕೊಂಡಿತೇ?

**ನಂಜ:**—(ಒಮ್ಮೆಗೆ ಹೋಗಿ ಬೂದಿ ಹಣೆಗೆರಚಿ) ಏನೆಂದೆ?

**ವೆಂಕು:**—ಏನು? ಹೊಡಿಯಲಿಕ್ಕೆ ಬರುತ್ತಿರಾ?

**ನಂಜ:**—ಆಯಿತೇ! ಗ್ರಹಗತಿ ಚೆನ್ನಾಗಿಲ್ಲದಿದ್ದರೆ ಹಾಗೆಯೇ ಸರಿ. ಹಣೆಮುಟ್ಟದ ಕೂಡಲೇ ಹೊಡೆಯಲಿಕ್ಕೆ ಬಂದಿರಾ ಎನ್ನಬೇಕೆ?

**ವೆಂಕು:**—ನನ್ನ ಹಣೆಗೇನಾಗಿದೆ! ತಲೆನೋವಾದುದು ಮೊನ್ನೆ, ಅದಕ್ಕೆ ಇವತ್ತು ಔಷಧ ತಾಗಿಸುತ್ತಿರಾ?

**ನಂಜ:**— ಅಯ್ಯೋ, ನಾನು ಬಾಯಿತೆರೆಯುವುದೇ ಕಷ್ಟ.

**ವೆಂಕು:**— ಇರಲಿ ಹೇಳಿಬಿಡಿ. ಹೇಗೂ ಗೊತ್ತಾಗಿದೆ. ಇದನ್ನೂ ಒಂದು ಕೇಳಿ, ಹೊತ್ತು ಮುಣುಗುವಾಗ ಊಟಕ್ಕೆ ಕುಳಿತು ಬಿಡುವ.

**ನಂಜ:**— ಓ ಇವಳೇ, ಸ್ವಲ್ಪ ಸುಮ್ಮನಿರು!

**ವೆಂಕು:**— ಏಸು ನನ್ನ ಹತ್ತಿರ ಮಾತನಾಡುವುದಿಲ್ಲ ಎಂದಿದೆಯೋ? ಆಯಿತು. ಅದೂ ಒಂದು ಅವತಾರವಾಗಲಿ.

**ನಂಜ:**— ಅಲ್ಲ, ನಾನು ಏನು ಮಾತನಾಡಿದರೂ ಕೊನೆಗೆ ಬರುವುದು ಇಲ್ಲಿಗೆ . . . ಇಲ್ಲ, ಹೇಳಿಬಿಡುತ್ತೇನೆ. ಕೇಳಿ ಬೈಯುವಷ್ಟು ಬೈದುಬಿಡು. ಇಷ್ಟು ಹೊತ್ತು ನಮ್ಮ ಪುರಾಣಿಕರಲ್ಲಿಗೆ ಹೋಗಿದ್ದೆ. ಜಾತಕ ತೋರಿಸಿದೆ. ಅವರೆಂದರು – ನಿನ್ನ ಗ್ರಹ ಗತಿ ಚೆನ್ನಾಗಿಲ್ಲ . . . ಶನಿ, ರಾಹು, ಕೇತು . . .

**ವೆಂಕು:**— ಇನ್ನೇನಿಲ್ಲವೇ?

**ನಂಜ:**— ಸ್ವಲ್ಪ ಸುಮ್ಮನಿರು.

**ವೆಂಕು:**— ಆಯಿತು.

**ನಂಜ:**— ಇವೆಲ್ಲ ಸೇರಿ ಕಾಟ ಕೊಡುತ್ತವೆ . . . ಆದ್ದರಿಂದ ಮುಟ್ಟಿದಲ್ಲಿ ಒಡಕು ಬರುತ್ತದೆ. ಅದಕ್ಕೆ ಜಪಗಿಪ ಮಾಡುವ ಅಂದರು . . . ಅಲ್ಲದೆ, ಯಾರೋ ನಮ್ಮ ಸಂಸಾರವನ್ನು ಹಾಳು ಕೆಡೆಯಬೇಕು ಎಂದು ಮಾಟಮಾಡಿದ್ದಾರೆ ಅಂದರು. ಅದಕ್ಕೆ ಇಷ್ಟು ಬೂದಿಯನ್ನು ನಿನ್ನ ಹಣೆಗೆ ತಾಗಿಸಲು ಕೊಟ್ಟಿದ್ದರು . . . ತಂದೆನು; ಏರಿಸಿದೆ. ಮತ್ತೇನಿಲ್ಲ.

**ವೆಂಕು:**— ನನ್ನ ಹಣೆಯ ಮೇಲಿನ ಕುಂಕುಮ ಸಾಲದಂತೇನು?

**ನಂಜ:**— ಅಲ್ಲ! ನನಗೂ ನಿನಗೂ ಒಡಕು ಬಂದೀತು ಎಂದು ಹೆದರಿ.

**ವೆಂಕು:**— ಏನು ಬಂದಿದೆ ಈ ವರೆಗೆ?

**ನಂಜ:**— ಮೊನ್ನೆ ನೀನು ಅಂದದ್ದು . . .

**ವೆಂಕು:**— ಪ್ಟ ಪ್ಷ . . . ಏನೆನ್ನಲಿ ನಿಮ್ಮ ಬುದ್ಧಿಗೆ! . . ಮೊನ್ನೆ ತಲೆ ನೋವೆಂದು ಒಂದು ಗಳಿಗೆ ಮಲಗಿದ್ದರೆ ನೂರು ಸಾರಿ ಕರೆದಿರಿ. ಸಿಟ್ಟು ಬಂದಿತು. ಒಂದು ಮಾತಾಡಿದೆ. ಹೀಗೆಂದು ಪುರಾಣಿಕರ ಮನೆಗೆ ಓಡಿದಿರಾ? ಅಷ್ಟಕ್ಕೇ ಮಾಟಮಾಡಿದ್ದಾರೆ; ನಿಷ್ಠುರ, ರಾಹು, ಶನಿ ಅಂತ ಹುಚ್ಚು ಕಟ್ಟಿಕೊಂಡು ಬರುವುದೇ? ಇದಲ್ಲದೆ ಇನ್ನೇನಾಗಿತ್ತು ಈ ಮನೆಯಲ್ಲಿ? . . .

**ನಂಜ:**— ಇನ್ನೇನಾಗಿಲ್ಲ.

**ವೆಂಕು:**— ಹಾಗಾದರೆ . . . ಈಗ ಮಾತಾಡಿದ್ದಕ್ಕೆ ತಿರುಗಿ ಪುರಾಣಿಕರ ಮನೆಗೆ ಓಡುವುದಿಲ್ಲವೇ? ಬೆಕ್ಕು ಕೂಗಿದರೆ, ನಾಯಿ ಕೂಗಿದರೆ ಅವರ ಮನೆಗೆ ಓಡುವುದಾದರೆ ಏನುಳಿಯಿತು?

**ನಂಜ:**— ಹಾಗಾದರೆ ಅವರು ಪ್ರಶ್ನೆ ನೋಡುವುದು ಸುಳ್ಳೇ? ನಾನು ಮಾತನಾಡುವುದರಲ್ಲೇ ಜಗಳ ಆಗುತ್ತೆ ಅಂದರು. ಆಯಿತಲ್ಲ!

**ವೆಂಕು:**— ಏನಾಯಿತು?

**ನಂಜ:**— ಈಗ ಮನೆಗೆ ಬರುವಾಗ ತ್ಯಾಂಪಣ್ಣ ಸಿಕ್ಕಿದ—

**ವೆಂಕು:**— ಅವನ ಮಗುವಿಗೆ ಹೇಗಿದೆಯಂತೆ?

**ನಂಜ:**— ಅದೆಲ್ಲಾ ಇದೆ. ನಾನೆನ್ನುವುದನ್ನು ಕೇಳು . . . ಬರುವಾಗ ಮಾತಾಯಿತು. ಆಯಿತು ಆಯಿತು . . . ಅವನು ನನ್ನನ್ನು ಬೈದನು . . . ನಾನು ಕಳ್ಳ ಎಂದನು . . .

**ವೆಂಕು:**— ಕಳ್ಳ ಅಂದರೆ? . . .

**ನಂಜ:**— ನಾನೂ ಅಂದೆ, ನನ್ನ ಮನೆಮಾಟಮಾಡಿ ಕೆಡಿಸಿದೆ ಎಂದು . . . ಸರಿ, ಬಾಯಿಂದ ಹೋಯಿತು, ಕೈಗೆ ಬಂತು . . . ಬಂತು ಅಂ

ದರೆ ಬರಲಿಲ್ಲ . . . ಬರುವುದಿತ್ತು. ನಾನು ಚೂರಿಯನ್ನು ತೆಗೆದೆ. ಅಷ್ಟರಲ್ಲಿ ಇದು ಸ್ವಾರಸ್ಯವಿಲ್ಲವೆಂದು ಅವನು ಪರಾರಿಯಾದ .. ಇದು ಜಾತಕ ಕೆಡದೆ—

**ವೆಂಕು:**— ನಿಮ್ಮ ಅತಿ ಬುದ್ಧಿಗೇನೆನ್ನಲಿ ನಾನು? ಅವನು "ನೀನು ಕಳ್ಳ" ಅಂದರೆ ನೀವು ಚಂದವಾಗಿ ಮಾತನಾಡಬಾರದಿತ್ತೇ? 'ಮಾಟ' ಅನ್ನಬೇಕೆ? ಪುರಾಣಿಕರ ಹತ್ತಿರ ಹೋದರೆ ಏನಾದರೂ ಹೇಳಿಯೇ ಹೇಳುತ್ತಾರೆ. ಅದನ್ನು ನಂಬಿ, ಅವನನ್ನು ಬೈದು–ನಿಷ್ಠುರಮಾಡಿಕೊಂಡಿರಿ . . . ಹೀಗೆ ಮಾಡಿದರೆ ನಾವು ಊರಿನಲ್ಲಿರಲಿಕ್ಕಿಲ್ಲ . . . ಕಳೆದ ಸಾರಿ ನಿಮಗೆ ಕಾಯಿಲೆಯಾದಾಗ ಮನೆ ಮುಂದೆ ಹಗಲು ರಾತ್ರಿ ಗಳಿಗೆ ಲೆಕ್ಕಮಾಡಿ ಕುಳಿತ್ತಿದ್ದ ತ್ಯಾಂಪಣ್ಣ, ಒಂದು ಹೆಚ್ಚುಕಡಿಮೆ ಮಾತನಾಡಿದರೆ, ಮಾತಿಗೆ ಮೈಮೇಲೆ ಹಾರಬೇಕೆ? ಚೂರಿ ತೆಗೆದುಕೊಂಡಿರಂತೆ . . . ಏನಾದರೂ ಆಗಿದ್ದರೆ ಜೈಲು ಕಾಣುವುದೇ, ಮತ್ತೇನು? . . . ಜಾತಕ ಕೆಟ್ಟದಲ್ಲ, ಏನಲ್ಲ. ಕೆಟ್ಟದ್ದು ಅಂದರೆ ನಿಮ್ಮ ನಾಲಿಗೆ. ಅದನ್ನು ಸ್ವಾಧೀನ ಹಿಡಿದರೆ ಎಲ್ಲಾ ಚೆನ್ನಾಗಿರುತ್ತದೆ.

**ನಂಜ:** —(ಮೌನ.)

**ವೆಂಕು:** ಏನು ಸುಮ್ಮನಾದಿರಿ?

**ನಂಜ:**— ನನಗೂ ಹಾಗೆ ಕಾಣುತ್ತದೆ. ಏನೇನು ತಿಳಿದು ಏನೇನು ಮಾಡಿದೆ . . .

**ವೆಂಕು:**— ಆದದ್ದು ಆಯಿತು. ಬೆಳಿಗ್ಗೆ ತ್ಯಾಂಪಣ್ಣನ ಮನೆಗೆ ಹೋಗಿ ತಪ್ಪನ್ನು ಒಪ್ಪಿಕೊಂಡು ಬನ್ನಿರಿ. ಹಾಗಲ್ಲ ಅಂಥವರ ಹತ್ತಿರ ನಿಷ್ಠುರ ಕಟ್ಟಿಕೊಳ್ಳಬಾರದು.

**ನಂಜ:** —(ಮೌನ)

**ವೆಂಕು:**— ನೀವು ಸುಮ್ಮನಿದ್ದರಾಗದು, ನಾಳೆ ಅವನು ಫಿರ್ಯಾದಿ ಕೊಟ್ಟರೆ ನಿಮ್ಮ ಅವಸ್ಥೆ ಏನಾದೀತು? ಬೇಕಾದರೆ ನಾನೂ ಬರುತ್ತೇನೆ. ಕಾವೇರಿಯನ್ನು ಕಾಣದೆ ಬಹಳ ದಿವಸಗಳಾದುವು ಹೂಂ, ಏಳಿ ಏಳಿ . . . ಅನ್ನ ಎಲ್ಲ ತಣಿದು ತಂಗಳಾಯಿತು .. ಇದೂ ನಿಮ್ಮ ಜಾತಕದಲ್ಲಿ ಬರೆಯಲಿಲ್ಲವೇ?

---

## ದೃಶ್ಯ ೬.

(ಹಾದಿಯಲ್ಲಿ ಪುರಾಣಿಕರು ಯೋಚನೆ ಮಾಡುತ್ತ ಪ್ರವೇಶಿಸುವರು.)

**ಪುರಾಣಿಕ:**— ಹೊತ್ತು ಮೂಡಿ ಝಾವವೆರಡಾಯಿತು. ನಂಜಪ್ಪ ಅಕ್ಕಿ ಕಾಯಿ ತರುತ್ತೇನೆ ಎಂದವನೂ ಕಾಣುವುದಿಲ್ಲ. ಇತ್ತ ಜಾತಕ ಕೇಳಲಿಕ್ಕೆ ತ್ಯಾಂಪಣ್ಣ ಬರುತ್ತೇನೆ ಅಂದವನೂ ಇಲ್ಲ. ಎಲ್ಲಾದರೂ ಬೇರೆಯವರ ಮನೆಗೆ ಹೋದರೋ. ಅಲ್ಲ, ಇದೂ ಒಂದು ವ್ಯಾಪಾರವಾಯಿತಲ್ಲ. ಊರಲ್ಲಿ ಒಂದು ಅಂಗಡಿ ಇದ್ದರೆ, ಎರಡು ಅಂಗಡಿ; ಒಬ್ಬ ಆಚಾರಿ ಇದ್ದರೆ ಇಬ್ಬರು ಆಚಾರಿಗಳು! ಒಬ್ಬ ಅಕ್ಕಸಾಲಿಗನಿಗೆ ಇನ್ನೊಬ್ಬ ಅಕ್ಕಸಾಲಿ . . ! ನಮ್ಮ ಒಂದು ಹಳ್ಳಿಗೆ, ಹಿರಿಯರಿಂದ ಅಂದರೆ ಒಂದೆರಡು ತಲೆಗಳಿಂದಲ್ಲ ಹತ್ತೆಂಟು ತಲೆಗಳಿಂದ, ಏನೋ ಇಷ್ಟು ಮಂತ್ರವಾದ, ಜ್ಯೋತಿಷ್ಯ ಕಲಿತುಕೊಂಡು ದಿನಸರಣ ಮಾಡುತ್ತಾ ಇದ್ದರೆ, ಅದಕ್ಕೆ ಈ ಅರಿಷ್ಠ ನಾಗಣ್ಣ ಭಟ್ಟ ಇವನೂ ಎದುರಂಗಡಿ ಇಡಬೇಕೇ? ಒಂದು ದಿನ ಅವನ ಕೊಬ್ಬನ್ನು ಇಳಿಸದೆ ಬೇರೆ ಮಾರ್ಗವೇ ಕಾಣುವುದಿಲ್ಲ.

ನಾನು ಒಂದು ಹೇಳಿದರೆ ಅವನೊಂದು ಹೇಳುವುದಾಗಿದೆ. ಮೊನ್ನೆ ಆ ಹೆಣ್ಣಿನ ಜಾತಕ ಬಂದಾಗ, ಕೂಟ ಚೆನ್ನಾಗಿಲ್ಲ ಅಂದರೆ, ಅವನು ಅಂದನಂತೆ ಇಂಥ ಸಂಬಂಧ ಬೇರೆ ಇಲ್ಲವೆಂದು. ನಾನು ರಾಹು ಕಾಟ, ಅಂದರೆ ಅವನು ಬುಧನ ದೆಸೆ, ಅನ್ನುತ್ತಾನೆ. ಇವೇ ಆಯಿತಲ್ಲ. ನಾವೇ ಹೀಗೆ ಕಚ್ಚಾಡಿದರೆ ಜನರು ಬರಬೇಕು ಎಲ್ಲಿಂದ?

ಆದರೂ ತ್ಯಾಂಪಣ್ಣ ಬರಬೇಕಿತ್ತು. ನಿನ್ನೆ ೫ ಪಾವಾಣೆ ಬಾಕಿ ಇರಿಸಿಯೇ ಹೋಗಿದ್ದನು. ಅದನ್ನು ತೆಗೆದುಕೊಂಡು ಹೋಗಲಿಕ್ಕಾದರೂ ಬರಬೇಕಿತ್ತು. ಇಲ್ಲ, ಏನೇ ಆಗಲಿ, ನಾನೇ, ಮನೆಯು ದನ ತಪ್ಪಿಸಿಹೋಯಿತು ಎಂದು, ಅವನ ಮನೆ ಅಂಗಣ ವನ್ನು ಹಾದು ಹೋದರೆ, ಅಲ್ಲೇ ಮಾತಾಡಿ ಬರುವುದಕ್ಕೆ ಆಗು ತ್ತದೆ. ಎಲ್ಲಾದರೂ ನಂಜಪ್ಪ ತ್ಯಾಂಪರ ತಲೆ ಆ ಭಟ್ಟ ತಿರುಗಿ ಸಿರಬೇಕು— ಅವನ ಗತಿ ಮೋಕ್ಷವಾಯಿತೆಂದು ಲೆಖ್ಖ. ಆ ಭಟ್ಟ ಅನ್ನುತ್ತಾನಂತೆ— ನನಗೇನು ಜಾತಕ ನೋಡಲಿಕ್ಕೆ ಬರುತ್ತದೆ — ಎಂದು! ನನ್ನನ್ನು ಕೇಳುವವನು ಇವನೋ? . . ನಮ್ಮಪ್ಪ ಮಾಡಿದ್ದು ಅದೇ ಕಸಬು, ಅಜ್ಜ ಮಾಡಿದ್ದೂ ಅದೇ; ನಾನು ಮಾಡುವುದೂ ಅದೇ. . . ನನ್ನನ್ನು ಈ ಅಡ್ಡ ಕಸಬಿ, ನಿನ್ನೆ ಹುಟ್ಟಿದ ಮಗು "ನೀನು, ತಾನು" ಅನ್ನುತ್ತಾನಲ್ಲ! ಇವನಿಗೆ ಗ್ರುಹಗತಿ ಕೆಟ್ಟದ್ದೇ ನಿಜ . . . ಹೊತ್ತಾಯಿತು, ಹೋಗುವಾ . . . ಹೋಗು ವಾ . . . ಥೂ! ಈ ಹಾಳಾದ ಚಳಿ ರಂಡೇದು ಪ್ರಾಣ ತಿನ್ನುತ್ತದೆ ಈಗಲೇ ಬರಬೇಕೇ ಚಳಿ! ಸೆಕೆಗಾಲಕ್ಕೆ ಬಂದರೆ ಅದರ ಅಪ್ಪನ ಗಂಟೇನು ಖರ್ಚಾಗುತ್ತದೆ!

---

## ದೃಶ್ಯ ೭.

(ತ್ಯಾಂಪಣ್ಣನ ಮನೆ. ಕಾವೇರಿಯೂ ವೆಂಕುವೂ ಕುಳಿತು ಮಾತಾಡುತ್ತಿರುವರು.)

**ಕಾವೇರಿ:**— ಅಯ್ಯೋ, ಅಯ್ಯೋ ವೆಂಕು, ನಿನ್ನನ್ನು ಕಾಣುವುದೆಂದರೆ ಈಶ್ವರನನ್ನು ತಪಸ್ಸುಮಾಡಿದ ಹಾಗಾಯಿತು. ಆ ದಿನ ಹುಣ್ಣಿಮೆಗೆ ಬಂದವಳು ಇವತ್ತು ಬರುವುದು. ನಾನೇ ಬರುತ್ತಿದ್ದೆ ಒಮ್ಮೆ. ಆದರೆ ಮಾಡುವುದೇನು? ಇಷ್ಟು ದಿನ ನಮ್ಮ ಮನೆಯ ವಿಚಾರ ಏನೂ ಸ್ವಾರಸ್ಯವಿದ್ದಿಲ್ಲ. ಅತ್ತಲಾಗಿ ಮಗು ಕಾಯಿಲೆ, ಇತ್ತಲಾಗಿ ದನ ಕರೆಯುತ್ತಿದ್ದಿಲ್ಲ. ಹೀಗೆಲ್ಲಾ ಆಗಿ ಯೋಚನೆ ಆಗಿತ್ತು.

**ವೆಂಕು:**— ಅದನ್ನೇ ಕೇಳಿ ಬಂದೆ ಅಕ್ಕ ನಿನ್ನೆ ಬರಬೇಕು ಅಂದಿದ್ದೆ. ಬಿಡುವು ಆಗಲಿಲ್ಲ. ಮನೆಯವರು ಹೊರಗೆ ಹೋಗಿದ್ದರು. ಬರುವಾಗಲೇ ಹೊತ್ತು ಬೈಯಾಯಿತು. ಇರಲಿ, ನಿನ್ನ ಮಗುವಿಗೆ ಜ್ವರ ಅಂದರು; ಹೇಗಿದೆ? ಏನು ಅಷ್ಟು ಜೋರಿಲ್ಲವಷ್ಟೆ?

**ಕಾವೇರಿ:**— ನಿನ್ನೆ ವರೆಗೆ ಹಾಗಿತ್ತು. ಈಗ ದೇವರ ದಯೆಯಿಂದ ಎಲ್ಲಾ ಸಮಾಧಾನಕ್ಕೆ ಬಂದಿದೆ. ಹೌದು, ಬಡಿದುಕೊಂಡರೆ ಮನೆಯಿಂದ ಹೊರಡುವುದಿಲ್ಲ. ಹೋಗಿ ಡಾಕ್ಟಾರರ ಔಷ್ಧಿ ತನ್ನಿ ಅಂದರೆ, ಅದರ ಹಣೆಯಲ್ಲಿ ಬರೆದುದ್ದಕ್ಕೆ ಮಾಡುವುದೇನು? ಅನ್ನುತ್ತಾರೆ! ಇವರ ಹಣೆಯ ಮೇಲೆ ಅವನು ಎಷ್ಟೆಲ್ಲಾ ಬರೆದಿದ್ದಾನೆಯೋ ದೇವರೇ ಬಲ್ಲ. ಅವರಂತೂ ಹೋಗುವುದಿಲ್ಲ ಎಂದು ಬಿಡುವಿನಲ್ಲಿ ಬಿಡುವು ಮಾಡಿ ಹೋಗಿ ಔಷ್ಧಿ ತಂದು ಕೊಟ್ಟೆ. ಕತ್ತಲಾಗುವುದರೊಳಗೆ ಜ್ವರ ಇಳಿಯಿತು. ಏನಿಲ್ಲ ಬರೇ

ಶೀತಜ್ವರ ಇರಬಹುದು ಅಂದರು ಆ ಪುಣ್ಯಾತ್ಮರ ವಂಶ ಉದ್ಧಾರ ವಾಗಲಿ ತಾಯಿ.

**ವೆಂಕು:**— ಅದೇನೋ ದನದ ಸುದ್ದಿ ಅಂದೆಯಲ್ಲಾ . . . ಯಾರ ಕಣ್ಣು ತಾಗಿತೋ ಏನೋ.

**ಕಾವೇರಿ:**— ಹ್ಹ ಹ್ಹ — ಅದೇನೆನ್ನುತ್ತೀ ನನ್ನ ಹುಚ್ಚಾಟಕೆಗೆ! ನಾನೂ ಹಾಗೆ "ದೃಷ್ಟಿಯಾಯಿತು. ಅದಕ್ಕೇ ಕೈ ಮುಟ್ಟಲಿಕ್ಕೆ ಬಿಡು ವುದಿಲ್ಲ" ಎಂದು ತಿಳಿದುಕೊಂಡಿದ್ದೆ. ಆದರೆ ನಿನ್ನೆ ನೋಡುವಾಗ ಅದರ ಕೆಚ್ಚಲಿನ ಹತ್ತಿರ ಮುಳ್ಳುಗೀರಿ ದೊಡ್ಡ ಗಾಯವಾಗಿತ್ತು. ಅದೇ ಚಳಿಗೆ ಒಡೆದು ಸಿಂಬಾಗಿತ್ತು. ಹೀಗಾಗಿ ಕೈ ಹಾಕಲಿಕ್ಕೆ ಬಿಡಲಿಲ್ಲ. ದೃಷ್ಟಿ ಎಂದೇ ನಂಬಿ ಅವರನ್ನು ಪುರಾಣಿಕರ ಮನೆಗೆ ಕಳುಹಿಸಿದ್ದೆ. ಏನೇನೂ ಗ್ರಹಗತಿ ಚೆನ್ನಾಗಿಲ್ಲ ಅಕ್ಕ ನಮ್ಮದು.

**ವೆಂಕು:**— ನಿಮ್ಮ ಮನೆಗೂ ಈ ಗ್ರಹಗತಿ ಬಂದಿತೇ? ಗ್ರಹಗತಿ ಏನಾಯಿತು ನಿಮಗೆ? ಎಲ್ಲಾ ಭ್ರಾಂತು! ಏನಾದರೂ ಏನಾ ದರೂ ಮಾಡುವುದು; ಏನಾದರೂ ಏನಾದರೂ ತಿಳಿದುಕೊಳ್ಳು ವುದು . . . ಇರಲಿ, ತ್ಯಾಂಪಣ್ಣ ಮನೆಯಲ್ಲಿಲ್ಲವೆ?

**ಕಾವೇರಿ:** — ಒಳಗೆ ಇದ್ದಾರೆ. ಕರೆಯಬೇಕೇ?

**ವೆಂಕು:**— ನಾನು ಬಂದಿದ್ದೇನೆ ಅನ್ನು. ಅವರನ್ನು ಕಾಣುವ ಎಂದು ಬಂದೆ.

**ಕಾವೇರಿ:**— ಏನು ವಿಶೇಷ ಅಕ್ಕ? . . .

**ವೆಂಕು:**— ಅವನೆದುರಿಗೆ ಹೇಳುತ್ತೇನೆ. ನಿನಗೆ ಅವನೇನು ಹೇಳ ಲಿಲ್ಲವೇ–ನಮ್ಮ ಯಜಮಾನರ ವಿಚಾರವನ್ನು! ಅವರೊಬ್ಬರು ಅತಿ ಬುದ್ಧಿಯವರು. ನಿನ್ನೆ ಅವರಿಗೂ ಇವರಿಗೂ ಭಾರಿ ಲಡಾಯಿ ಯಂತೆ! ಅವನ ಕಾಲು ಹಿಡಿದಾದರೂ ರಾಜಿಮಾಡಿಕೊಳ್ಳಿ

ಎಂದು ಹೇಳಲು ಬಂದೆ. ನಮ್ಮ ಯಜಮಾನರು ಈಗಲೇ ಬರಬಹುದು.

**ಕಾವೇರಿ:**— ನನ್ನ ಹತ್ತಿರ ಉಸಿರು ಎತ್ತಲಿಲ್ಲ! ಹೀಗೂ ಇದೆಯೇ!.. ಹೌದೇ . . . ಓ . . . ಇವರೇ . . ವೆಂಕಕ್ಕ ಬಂದಿದ್ದಾಳೆ . . . ನಿಮ್ಮನ್ನು ಕಾಣುವುದಕ್ಕೆಂದು (ತ್ಯಾಂಪ ಬರುವನು)

**ವೆಂಕು:** — ತ್ಯಾಂಪಣ್ಣ, ಏನು ನಿನ್ನೆಯ ಗಲಾಟೆ? . . . ನಮ್ಮವರ ಹಣೆ ಬರಹ ನಿನಗೆ ಗೊತ್ತಿದೆ. ಅವರೇ ನೀನು ಮಾಡಿದ ಉಪಕಾರ ವನ್ನು ಸ್ಮರಿಸಿ ಸುಮ್ಮನಿರಬೇಕಿತ್ತು. ಅದೂ ಇಲ್ಲ, ನೀನು ಹಿರಿ ಮನುಷ್ಯನಲ್ಲವೇ? ನೀನಾದರೂ ಅವರಿಗೆ ಎರಡು ಬುದ್ಧಿ ಹೇ ಳುವ ಬದಲು ಹೀಗೆ ಕತ್ತಿ ಚೂರಿ ಹಿಡಿದು . . . ಅಯ್ಯೋ . . .

**ಕಾವೇರಿ:**— ಇದೇನು ಭಾರೀ ಸುದ್ದಿ ಕಾಣುತ್ತದೆ . . . ನನ್ನ ಹತ್ತಿರ ನೀವು ಉಸಿರು ಸಹ ತೆಗೆಯಲಿಲ್ಲ. ನಾನು ಈ ಮನೆಯ ಹೊರಗೇ ಒಳಗೇ?

**ತ್ಯಾಂಪ:**— ನೀನು ಸ್ವಲ್ಪ ಸುಮ್ಮನಿರು. ನನ್ನ ಹಣೆಬರಹಕ್ಕೆ ಯಾರೇನು ಮಾಡುತ್ತಾರೆ? . . . ನಿನ್ನೆ ಪುರಾಣಿಕರ ಮನೆಗೆ ಹೋದೆ ಅಂದೆನಲ್ಲಾ, ಅದೇ ವಿಚಾರ.

**ಕಾವೇರಿ:** - ಇರಲಿ, ಅದಕ್ಕೆ ಇಷ್ಟೆಲ್ಲಾ ಏನಾದದ್ದು?

**ತ್ಯಾಂಪ:**— ಆದದ್ದೇನಿಲ್ಲ . . ಅವರೆಂದರು— ಕರೇ ಮುಸುಡಿನ ಕಳ್ಳ ಪಾಡಗ ಕದ್ದದ್ದು ಎಂದು. ಆ ದಿನ ನಂಜ ಬಂದಿದ್ದನಲ್ಲ-ಅವನೇ ಎಂದು ತಿಳಿದು — 'ನೀನೇ' ಅಂದೆ ಅವನಿಗೆ . .

**ಕಾವೇರಿ:**— ಅಷ್ಟರೊಳಗೆ ಹೇಳಿಯಾಯಿತೇ? ಈಗ ಒಲೆಬೂದಿಯಲ್ಲಿ ಪಾಡಗ ಸಿಕ್ಕಿತಲ್ಲಾ, ಏನೆನ್ನುತ್ತೀರಿ? ಎಲ್ಲಿ ಮಗು ಆಟವಾಡಿ ಹಾಕಿತೋ ಏನೋ . . . ಅವರು ಹೇಳಿದರಪ್ಪ . . . ಅದನ್ನು

ಕೂಡಲೇ ಹೊರಗೆಹಾಕುವುದೇ? ಆಯಿತು, ಅದು ಸಿಕ್ಕಿದ ಮೇಲೂ ನಂಜಪ್ಪನ ಹತ್ತಿರ ಹೇಳಬಹುದಿತ್ತಲ್ಲಾ . . .

**ತ್ಯಾಂಪ:**— ಅಷ್ಟೆಲ್ಲಾ ಆದ ಮೇಲೆ ಅವನಿಗಿಂದು ಹೇಗೆ ಮೋರೆ ತೋರಿಸುವುದು ಅಂತ . . . ಒಟ್ಟಾರೆ ನನ್ನ ಹಣೆಬರಹ . . .

**ಕಾವೇರಿ:**— ಹಾಳಾಯಿತು ಈ 'ಹಣೆಬರಹ!' . . . . ಅಲ್ಲಿ ನೋಡಿ, ನಂಜಣ್ಣನೇ ಬಂದನು. ಹೇಳಿ . . . 'ಹಾಗೆಲ್ಲಾ ತಿಳಿಯಬಾರದು, ಮರೆಯಬೇಕು' ಎಂದು.

**ನಂಜ:**— ತ್ಯಾಂಪಣ್ಣಾ, ಮನೆಯಲ್ಲೇ ಇದ್ದಿಯಾ? . . .

**ತ್ಯಾಂಪ:**— ನಂಜಪ್ಪಾ, ನಾನು ಅನ್ಯಾಯಗಾರ, ಸಿಟ್ಟುಮಾಡಬೇಡ. ಪುರಾಣಿಕರು ನುಡಿದದ್ದು ಮನಸ್ಸಿನಲ್ಲಿ ಕೊರೆದು ಹಾಗೆ ಮಾಡಿದೆ. ಪಾಡಗ ಒಲೆಯಲ್ಲೇ ಇದ್ದಿತ್ತು . . . ಕ್ಷಮಿಸು. ಏನಿದ್ದರೂ ಕ್ಷಮಿಸು.

**ನಂಜ:**— ನನಗೂ ನಾನು ನಿನ್ನೆ ಆಡಿದ್ದು ಹೆಚ್ಚು ಎಂದು ತೋರಿ ನಾನೇ ಬಂದೆ . . . ಹೋಗಲಿ, ಅದನ್ನು ಮರೆತುಬಿಡು . . . ಮಗು, ದನಗಿನ ಎಲ್ಲಾ ಚೆನ್ನಾಗಿದೆಯೇ?

**ತ್ಯಾಂಪ:**— ಎಲ್ಲಾ ಚೆನ್ನಾಗಿದೆ. ಒಟ್ಟಾರೆ ಎಲ್ಲವನ್ನೂ ನಿನ್ನ ಮೇಲೆ ಹಾಕಿದೆ. ನನ್ನ ಗ್ರಹಚಾರ . . .

(ಪುರಾಣಿಕರ ಪ್ರವೇಶ.)

**ಪುರಾ:**— ಹೋ! ಇಬ್ಬರೂ ಇಲ್ಲೇ ಇದ್ದಾರಲ್ಲ . . .

**ನಂಜ:**— ಪುರಾಣಿಕರೇ ಬನ್ನಿ . . . ಇಲ್ಲಿ ಬನ್ನಿ . . .

**ಪುರಾ:**— ಏನಯ್ಯಾ ಗದ್ದಲ!

**ನಂಜ:**— ಗದ್ದಲವೇನಿಲ್ಲ . . . ಪಾಡಗ ಏನಾಯಿತೆಂದಿರಿ ನೀವು? ಕದ್ದದ್ದು ಯಾರೆಂದಿರಿ? ಇತ್ತ ಮಾಟಮಾಡಿದವರು ಯಾರೆಂದಿರಿ?

**ಪುರಾ:**— ನನ್ನನ್ನೇನು ಹೆದರಿಸುತ್ತೀಯೋ ಮಹಾರಾಯಾ!

**ಕಾವೇರಿ:**— ಹಾಗಲ್ಲ. ನೀವು . . . ಪಾಡಗ ಕದ್ದವರು— ಕರಿ ಮುಸುಡಿನವರು ಅಂದರಂತೆ. ಅದು ಒಲೆ ಬೂದಿಯಲ್ಲಿ ಸಿಕ್ಕಿತಲ್ಲ . . . ನಂಜಪ್ಪನ ಮೇಲೆ ಸುಮ್ಮನೆ ಅನ್ಯಾಯ ಹಾಕಿ, ನಮ್ಮ ಯಜಮಾನರ ತಲೆಕೆಡಿಸಿ . . .

**ಪುರಾ:**— ಏನು? ನಾನು ನಂಜಪ್ಪನೆಂದು ಹೆಸರು ಹೇಳಿದೆನೆ? ಏನು ತ್ಯಾಂಪ?

**ತ್ಯಾಂಪ:**— ತಾವು ಹೆಸರು ಅನ್ನದಿದ್ದರೂ ನಾನು ಹಾಗೆ ಗ್ರಹಿಸಿದೆ. ಕರಿಮುಸುಡಿನವ ಅಡಗಿಸಿದ ಎಂದಿರಿ . . .

**ಪುರಾ:**— ಹಾಗೆನ್ನು! . . . ಕರಿ ಮುಸುಡಿನವ ಅಂದರೆ ನಂಜಪ್ಪನೋ! ಕರಿಮುಸಿ ಕೆಂಡ ಎಂದೂ ಆಗಬಹುದು. ಒಲೆಯಲ್ಲಿದ್ದ ಮೇಲೆ ಹಾಗೇ ಅರ್ಥವಾಯಿತಲ್ಲ! ನನ್ನ ಜೋತಿಷ್ಯ ತಿಳಿಯುವ ಯೋಗ್ಯತೆ ಇಲ್ಲದೆ . . .

**ಕಾವೇರಿ:**— ಮಗು ಉಳಿಯುವುದು ಕಷ್ಟವೆಂದಿರಲ್ಲ . . . ಇವತ್ತು ಚೆನ್ನಾಗಿದೆಯಲ್ಲ! . . .

**ಪುರಾ:**— ಕಷ್ಟ ಅಂದೆನೇ ವಿನಹ ಸಾಯುತ್ತದೆ ಅಂದೇನು? . . . .

**ಕಾವೇರಿ:**— ಅದು ಹೋಗಲಿ. ದನಕ್ಕೆ ದೃಷ್ಟಿ ಬಿತ್ತು ಅಂದು . . .

**ತ್ಯಾಂಪ:**— ಹಾಗೆನ್ನಲಿಲ್ಲ, ಕಂಟಕ ಅಂದರು.

**ಕಾವೇರಿ:**— ಏನು ಕಂಟಕ ಬಂತು? ಒಂದು ಮುಳ್ಳು ಗೀರಿ ಗಾಯವಾಗಿ ಹಾಲು ಇಳಿಸಲಿಲ್ಲ. ನೀವು ಭಾರೀ ಮಾಡಿ ಹೆದರಿಸಿದಿರಲ್ಲಾ?

**ಪುರಾ:**— ಕಂಟಕ ಅನ್ನಲಿಲ್ಲವೇ? . . . ಕಂಟಕ ಅಂದರೇನು? . . . ಮುಳ್ಳು ಎಂದು. ಕೇಳು ಯಾರನ್ನಾದರೂ ಸಂಸ್ಕೃತ ಬಲ್ಲವ

ರನ್ನು. ಅದಕ್ಕೇ ಅನ್ನುವುದು, ಗೀರ್ವಾಣ ಕಲಿಯಬೇಕು ಎಂದು.

**ತ್ಯಾಂಪ:**— ಕಾವೇರಿ ಸುಮ್ಮನಿರು. ಅವರ ತಪ್ಪಿಲ್ಲ. ಅವರು ಬಲ್ಲವರು. ಸುಳ್ಳೆನ್ನಲಿಕ್ಕಿಲ್ಲ. ನಮ್ಮ ಗ್ರಹಚಾರ ಕೆಟ್ಟ ನಾವು ಒಂದಕ್ಕೊಂದು ಅರ್ಥಮಾಡಿದರೆ ಅವರ ತಪ್ಪೇನು? ಅವರು ನಮ್ಮ ಹೊಲಕ್ಕೆ ಭೂತದ ಉಪದ್ರ ಎಂದರು. ಅದಾದರೂ ಸುಳ್ಳೇ? ೪೦ ಮುಡಿ ಆಗುವ ಹೊಲದಲ್ಲಿ ೪ ಆಗಲಿಕ್ಕೆ ಬೇ ರೇನು ಕಾರಣ? . . .

**ನಂಜಪ್ಪ:**— ನೀನು ಸುಮ್ಮನಿರು ತ್ಯಾಂಪಣ್ಣ. ನಾಲ್ವತ್ತು ಮುಡಿ ಇದ್ದುದು ನಾಲ್ಕು ಆಯಿತಂತೆ! ನಿನ್ನ ಅಜ್ಜನ ಕಾಲದ ಕಥೆ ಯನ್ನು ಹೇಳಬೇಡ . . . . ಅಜ್ಜನ ದುಡಿತ ಏನು, ನಿನ್ನ ದುಡಿತ ಏನು? ಅಜ್ಜ ಎಂಟು ಸಾಲು ಹೂಡಿದರೆ ನೀನು ಒಂದು ಸಾಲು ಹೂಡುವುದಿಲ್ಲ. ಅಜ್ಜ ೧೦೦ ಬುಟ್ಟಿ ಗೊಬ್ಬರ ಹಾಕಿದರೆ ನೀನು ನಾಲ್ಕು ಬುಟ್ಟಿ ಹಾಕುವುದಿಲ್ಲ . . .

**ತ್ಯಾಂಪ:**— ಹಾಕಬೇಕೆಂದರೆ ಎಲ್ಲಿಂದ ತರುವುದು? . . .

**ನಂಜಪ್ಪ:**— ಹಾಗಿದ್ದರೆ ಬೆಳೆ ಆಗಬೇಕು ಎಲ್ಲಿಂದ? ನಾಲ್ಕು ಮುಡಿ ಆಗುವುದೇ ಹೆಚ್ಚು . . . ಅದಕ್ಕೆ ಸರಿಯಾಗಿ ಭೂತದ ಉಪದ್ರ ಎಂದರು ಅವರು . . . ನಮಗೆ ಮಾಟಮಾಡಿದ್ದಾರೆ ಅಂದ ಹಾಗೆ.

**ಪುರಾ:** – ನಂಜಪ್ಪ . . . ಏನು ಅಪಮಾನ ಮಾಡುತ್ತೀಯಾ? ನಾನು ಭೂತದ ಉಪದ್ರ ಅಂದದ್ದು ಸುಳ್ಳೇ . . . ನನ್ನ ಜ್ಯೋತಿಷ್ಯ ವನ್ನು . . . ಇಲ್ಲ, ಆ ಭಟ್ಟ ನಿನ್ನ ಕಿವಿ ಊದಿರಬೇಕು. ಆ ಮುಂಡೇಗಂಡ ಸಿಗಲಿ . . .

**ನಂಜ:**— ಯಾವ ಮುಂಡೆಗಂಡನೂ ನನ್ನ ಕಿವಿ ಊದಿಲ್ಲ . . . ಭೂತದ ಉಪದ್ರ ಎಂದಿರಲ್ಲ . . . ಯಾವ ಭೂತ . . .

ನನ್ನ ಹೆಂಡತಿಗೆ ಯಾವ ಭೂತ? . . . . ನನಗೆ ಯಾವ ಭೂತ? . . .

**ಪುರಾ:**— ಭೂತ, ಭೂತ ಅಂದರೇನಯ್ಯಾ— ತಿಳಿಯದೇ ಮಾತ ನಾಡುತ್ತೀರಿ ಭೂತ ಅಂದರೆ ಐದು . . . ಪಂಚಭೂತ ಎಂದು ಶಾಸ್ತ್ರ . . . ಪ್ರಥ್ವಿ, ವಾಯು, ಆಪ, ತೇಜ, ಆಕಾಶ ಎಂದು. ನೆಲ, ಗಾಳಿ, ನೀರು, ಬೆಂಕಿ, ಆಕಾಶ ಎಂದು ಅದರ ಅರ್ಥ. ಈ ದೇಹವು ಪಂಚಭೂತಗಳಿಂದ ಆದದ್ದು ಎಂದು–ಶಾಸ್ತ್ರ ಸುಳ್ಳೇ? ...

ಅವನ ಹೊಲಕ್ಕೆ ಭೂತದ ಉಪದ್ರ . . . ಪ್ರಥ್ವಿ ಎಂಬ ಭೂತ. . . ಇಂಥದೇ ಭೂತ ಎಂದು ನಾನು ಅಂದೆನೆ? ನಿಮಗೂ ಹಾಗೇ . . .

**ತ್ಯಾಂಪ:**— ನಂಜಪ್ಪ . . . ನಿನಗೂ ಅಜ್ಞಾನವೇನಯ್ಯಾ . . . ನಮ್ಮ ಹಣೆಬರಹದಿಂದ ನಾವು ಕಂಡಾಬಟ್ಟೆ ಅರ್ಥಮಾಡಿದರೆ ಅವರೇನು ಮಾಡಿಯಾರು? ಅವರ ಶಾಸ್ತ್ರ ಸುಳ್ಳೇ? . . .ಮುಖ್ಯ, ದೂರು ನಮ್ಮ ಹಣೆಬರಹಕ್ಕೆ . . .

**ಕಾವೇರಿ:**— ಹಣೆಬರಹ ಹಾಳಾಯಿತು! ಮಾತುಮಾತಿಗೂ ಅದೇ! ಹಣೆಬರಹ ಅಂದೇ ಹೀಗಾದದ್ದು ನಿಮ್ಮ ಅವಸ್ಥೆ! . . . ಇನ್ನು ಈ ಮನೆಯಲ್ಲಿ ಹಣೆಬರಹದ ಸುದ್ದಿ ಎತ್ತಿದರೆ ನೋಡಿಕೊಳ್ಳಿ! . . .

**ತ್ಯಾಂಪ!**— ಏನೆನ್ನುತ್ತೀಯೋ, ನಿನ್ನ ಹಣೆಬರಹ!

**ಕಾವೇರಿ:**— ಮತ್ತೆ ತೆಗೆದಿರಾ ಅದರ ಸುದ್ದಿ? . . .



**ರಂಗಣ್ಣ:** "ಹೋ ಮರತೇಹೋಯಿತು; ಇವತ್ತು ಅಮಾವಾಸೆ ಒಪ್ಪತ್ತು."

# ಮುನ್ನುಡಿ

ಹೆಸರೇ ಈ ನಾಟಕದ ಅಂತರಂಗವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ನಮ್ಮಲ್ಲಿ ಕಟ್ಟೆಪುರಾಣದ ಹವ್ಯಾಸ ಬಹಳ. ಇಂಥ ಪುರಾಣವಂದಿಗರಲ್ಲಿನ ಹರಟೆಯ ವಿಷಯವೆಂದರೆ, ಸಮಾಜದ ವಿಮರ್ಶೆ. ತಾನೊಬ್ಬನಲ್ಲದೆ ಪ್ರಪಂಚವೆಲ್ಲ ಅವರ ತುಲನೆಗೆ, ಅವಹೇಳನೆಗೆ ಗುರಿಯಾಗುವುದು. ನಿಂದಾಭಾವದಿಂದಲೇ ಟೀಕಿಸುವ ಸ್ವಭಾವ ಅವರದು. ಹಾಗೆ ಟೀಕಿಸುವಾಗ ಉಪಯೋಗಿಸುವ ಶಬ್ದಗಳು ಅಷ್ಟೇ ಕಠಿಣ, ಕ್ರೂರ, ವಿಷಪೂರಿತವಾದುವು. ಅಂಥ ಚೇಷ್ಟೆಗಳನ್ನು ಕೇಳುವಾಗ ನಮಗೂ ಕಿವಿಗೆ ಇಂಪಾಗಬಹುದು. ಆದರೆ ಆ ನಿಂದೆಗೆ ಬಲಿಯಾಗುವ ಬಡಪಾಯಿಯು ಆತ್ಮಹತ್ಯೆಮಾಡಿಕೊಳ್ಳಬಹುದು. ಇವುಗಳಿಂದೆಲ್ಲ ನೊಂದ ಹೃದಯವೇ ನನ್ನನ್ನು ಈ ನಾಟಕಕ್ಕೆ ಪ್ರೇರಿಸಿತು. ಅದನ್ನು ಬರೆಯುವಾಗ ನಿರ್ಧಾಕ್ಷಿಣ್ಯವಾಗಿ ಟೀಕಾಚಾರ್ಯರ ನುಡಿಗಳನ್ನು ಉಪಯೋಗಿಸಿದ್ದೇನೆ. "ಮುಂಡೆ" ಯೆಂದು ನಾಲಗೆ ಇಳಿಸುವವರ ಮಾತಿನಲ್ಲಿ "ವಿಧವೆ" ಎಂಬ ಸೌಮ್ಯತರ ಪದ ಪ್ರಯೋಗವನ್ನು ಮಾಡಲಿಲ್ಲ.

ಅವರ ಟೀಕೆಗಳನ್ನು ಕುರಿತು ಒಂದು ಟೀಕೆ. ಅವರ ಮಾತುಗಳಲ್ಲಿ ಹುರುಳಿಲ್ಲವೆಂದಲ್ಲ. ಸತ್ಯವಿದೆ, ಸುಳ್ಳೂ ಇದೆ, ಸೊಗಸೂ ಇದೆ, ಅಸಹ್ಯತೆಯೂ ಇದೆ; ಗುಣವೂ ಇದೆ, ದೋಷವೂ ಇದೆ . . . . ಅವುಗಳನ್ನು ನಾನು ಅಸಹನೆಯಿಂದ ಕಾಣುವುದು ಇವುಗಳಿಂದಾಗಿ ಅಲ್ಲ. ಅವುಗಳ ಹಿಂದಿರುವ ದುರುದ್ದೇಶ, ಸ್ವಾರ್ಥ ಸಂಕುಚಿತ ಭಾವಗಳ ದೆಸೆಯಿಂದ.

ಈ ನಾಟಕವನ್ನು ಏಕಾಂಕ ದೃಶ್ಯವನ್ನಾಗಿ, ಆಡಬಲ್ಲ, ಬರೆಯಬಲ್ಲ ಭಾಷೆಯಲ್ಲೂ ಬರೆದಿರುತ್ತೇನೆ. ಗ್ರಾಮ್ಯದ ಛಾಯೆಯು ಭಾಷಾಸರಣಿಯ ಮೇಲೆ ಬೀಸಿದೆ. ಆದರೆ ಕೇವಲ ಗ್ರಾಮ್ಯವೂ ಆಗದಂತೆ ಯತ್ನಮಾಡಿರುವೆ. ನಾಟಕಪ್ರೇಮಿಗಳಿಗೆ ಇಂದೊಂದು ಪ್ರೇಮದ ಕಾಣಿಕೆ.

ಇತಿ,

ತಾ. ೨೮-೨-೧೯೩೩,
ಮಂಗಳೂರು.

ಶಿವರಾಮ ಕಾರಂತ.

# ಪಾತ್ರವರ್ಗ

ರಂಗಣ್ಣಯ್ಯ— ರಸಿಕನೆಂದು ಊರವರ ಗ್ರಹಿಕೆ. ೩೦–೩೫ ವಯಸ್ಸು. ಊಟಕ್ಕೆ ಕೊರತೆಯಿಲ್ಲ; ದುಡಿದೇ ತಿನ್ನುವ ಜೀವಿಯಲ್ಲ. ಹರಟೆಯಲ್ಲಿ ಹೊತ್ತು ಕಳೆಯಬೇಕು. ಸಮಯ ಕಳೆಯಲು ಹಾದಿಯಲ್ಲಿ ಹೋಗುವವರನ್ನೆಲ್ಲ ಕರೆದು ಮಾತನಾಡಿಸುವುದು ರೂಢಿ. ಅವರಿಗೂ ರಂಗಣ್ಣನ ಮಾತಿನಲ್ಲೊಂದು ಮೆಚ್ಚುಗೆ; ಅಗ್ಗದ ಎಲೆ ಅಡಿಕೆ ಸಿಗುತ್ತದೆಂಬ ಆಸೆ.

ರಾಮಣ್ಣಯ್ಯ— ರಂಗಣ್ಣನ ಕೊರಳ ಪ್ರಾಣ. ಯಾರಿಲ್ಲದಿದ್ದರೂ ಅವನ ಪುರಾಣ ಕೇಳಲು ಇವನಿರುವ. ಅವನ ವಯಸ್ಸು, ಸ್ಥಿತಿ ಅವನಂತಿಲ್ಲ; ಆದರೂ ಪ್ಯೈಗಳ್ಳ.

ವೆಂಕಟ್ರಾಯರು — ಊರಿನ ಶ್ಯಾನುಭಾಗರು; ಕಟ್ಟೆಯ ಸದಸ್ಯರಲ್ಲೊಬ್ಬರು.

ಶ್ರೀಧರ ಭಟ್ಟರು— ಊರಿನ ದೇವಾಲಯದ ಅರ್ಚಕ. ಕಟ್ಟೆಗೆ ಬರುವವರು. ಮಾತು ಬಾರದಿದ್ದರೂ ಪರನಿಂದೆಯಲ್ಲಿ ಒಂದು ಆನಂದ. ಬಡವರು.

ಐತಪ್ಪ— ಹೊಟ್ಟೆಗಿಲ್ಲ; ಬಡವರಲ್ಲಿ ಬಡವ. ಕೆಲವು ಬಾರಿ ಬೇಡಿಯೇ ಜೀವನ; ಈಗ ತಿರುಪಯೆತ್ತಲು ದಾಸನಾಗಿರುವ.

ಭಾಗಮ್ಮ— ರಾಮಣ್ಣನ ಹೆಂಡತಿ; ಭಟ್ಟರ ಮಗಳ ಗೆಳತಿ.

# ಕಟ್ಟೆ ಪುರಾಣ

(ರಂಗಣ್ಣಯ್ಯನ ಮನೆಯ ಮುಂದಿನ ಪಡಸಾಲೆ. ರಂಗಣ್ಣಯ್ಯನು ಕಾಲುಕಟ್ಟಿಕೊಂಡು, ಎದುರಿಗೆ ಒಂದು ರಾಮಾಯಣವನ್ನು ಬಿಡಿಸಿ ಕುಳಿತಿರುವನು. ಬಳಿಯಲ್ಲೇ ಪೀಕದಾನಿ. ಈಚೆ ಎಲೆಯ ಹರಿವಾಣ. ಒಂದೆರಡು ಹಿಡಿ ಇಸ್ಪೀಟುಗಳು.)

**ರಂಗಣ್ಣಯ್ಯ:**— ಅಯ್ಯಯ್ಯಯ್ಯೋ, ಏನಾಯ್ತು ಇವರಿಗೆ? ರಾಮಣ್ಣ, ಸುಬ್ಬು, ತಿಮ್ಮು ಯಾರೊಬ್ಬರೂ ಇಲ್ಲ. ನಿತ್ಯದ ಸೇವೆ ನಡಿಸಲು ಬರುವ ಐತಪ್ಪನೂ ಸಹ . . . ಏನು, ನಾಲ್ಕು ಹನಿ ಮಳೆ ಬಂದಿತೆಂದರೆ ದೊಡ್ಡ ಮಳೆಗಾಲವೇ ಬಂದಿತೆಂದು ತಿಳಿದರೋ ಏನು? ಇರಬೇಕು, ಇರಬೇಕು— ಬೀಜ, ಹೂಟೆ ಯೆಂದು ಗದ್ದೆ ಕೆಸರಲ್ಲಿ ಬಿದ್ದಿರಬೇಕು ಎಲ್ಲರು. ಆದರೂ ರಾಮಣ್ಣ ಬರಲಿಲ್ಲವೆಂದರೆ ಆಶ್ಚರ್ಯ. ಎಷ್ಟು ಕೆಲಸವಿದ್ದರೂ ಬಂದು ನನ್ನ ಮುಖ ನೋಡದೆ ಹೋಗುವ ಮಗನಲ್ಲ. ಇವತ್ತು ಅವನೂ ಇಲ್ಲ.

ಅಲ್ಲ, ಬ್ರಾಹ್ಮಣರಾಗಿ ಹುಟ್ಟಿ ಹೊಲಮನೆ, ಕೆಸರುಗೊಬ್ಬರ ಎಂದು ತಿರುಗುತ್ತಾರಲ್ಲ— ಏನು ಮರುಳು? ಹೊಟ್ಟೆಗೆ ಕಾಳು ಕಡಿಮೆಯಾದರೆ ಇವರು ನೇಗಿಲು ಹಿಡಿಯಲಿಕ್ಕೂ ಅಡ್ಡಿಯಿಲ್ಲ. ಏನೋ, ಇದ್ದ ನಾಲ್ಕು ಮುಡಿ ಗದ್ದೆಯನ್ನು, ನನ್ನಂತೆ ಗೇಣಿಗೆ ಕೊಟ್ಟು, ಸುಖವಾಗಿ ಬಂದ ಅಕ್ಕಿಯನ್ನು ತಿಂದುಕೊಂಡು, ಇರ ಬಾರದೇ? ಬ್ರಾಹ್ಮಣರಿಗೆ ಬೇಸಾಯವೇಕೆ?

ಹಾಳಾಗಲಿ ಅವರ ಸುದ್ದಿ. ರಾಮಾಯಣವನ್ನಾದರೂ ಇಷ್ಟು ಓದುವ. ಅದನ್ನು ಕೇಳುವುದಕ್ಕಾದರೂ ನಾಲ್ಕು ಬೋಳು ತಲೆಗಳು ಬರುತ್ತಿದ್ದುವು. ಇವತ್ತು ಅವೂ ಇಲ್ಲ. ಹಾಂ -- ಮರೆತೇ ಬಿಟ್ಟೆ--ಅಮಾವಾಸ್ಯೆ ಒಪ್ಪತ್ತು. ಉಪವಾಸ ಎಂದು ಹೇಳಿ, ಉದ್ದಿನ ಕಡುಬು ಬೇಯಿಸಲಿಕ್ಕೆ ಕುಳಿತರೆಂದು ಕಾಣುತ್ತದೆ. ಪುಣ್ಯಾತ್ಮರಪ್ಪ, ಪುಣ್ಯಾತ್ಮರು. ಈ ಸ್ವಾಮಿಯ ರಂತಹ ಪುಣ್ಯಾತ್ಮರು ಯಾರಿಲ್ಲ ಏನು ಪಡೆದು ಬಂದರೋ! ಹೆದರಿಸುವವರು ಅನ್ನಲಿಕ್ಕೆ ಗಂಡಂದಿರಿಲ್ಲ . . ಅವರು ಮಾಡಿದ್ದು, ಅವರು ಬಿಟ್ಟದ್ದು. ಮನೆಗೂ ಅವರು ಯಜಮಾನಿಯರು, ಊರ ಹೊರಗೂ ಅವರೇ! ಉಳಿದವರೆಲ್ಲ ಗಂಜಿನೀರು ಕುಡಿಯು ತ್ತಿದ್ದರೆ, ಬೆಳಿಗ್ಗೆ ತಂಗಳು ಊಟವಿಲ್ಲ ಎಂದು ಹೆಸರು ಗಂಜಿ— ಹತ್ತು ಘಂಟೆಯಾಗುತ್ತಲೂ, ಜೀವಸಂಕಟ ಎಂದು ಬೆಲ್ಲದ ಪಾನಕ . . . ಮಧ್ಯಾಹ್ನಕ್ಕೆ ಇದ್ದೇ ಇದೆ—ಒಂದು ಸೇರು ಅಕ್ಕಿ ಅನ್ನ, ಬೆಳ್ತಿಗೆ* ಬೇರೆ ಅದರಲ್ಲಿ, ಒಂದು ಪಾವು ಉಪ್ಪಿನಕಾಯಿ ರಸ, ಅರ್ಧಸೇರು ಹಸಿಮೆಣಸು. ನಿತ್ಯಕಟ್ಟಲೆ ಊಟವಾಗು ವಾಗ ಝಾವ ಹೊತ್ತು ಸರಿಯುತ್ತದೆಸ್ನಿ. ಊಟವಾದ ಮೇಲೆ ಸಣ್ಣದೊಂದು ನಿದ್ದೆ ತೆಗೆದು ಬಂದರೇ—ರಂಗಣ್ಣಯ್ಯನ ಕಟ್ಟೆಗೆ ಪುರಾಣ ಕೇಳಲಿಕ್ಕೆ. ಅತ್ತ ಮನೆಕೆಲಸ ತಪ್ಪಿಸಿದಹಾಗಾ ಯಿತು. ಇತ್ತ ನನ್ನ ಲೆಕ್ಕದಿಂದ ಪಂಥೇರು ಪುಣ್ಯ ಸಂಪಾಸಿದ ಹಾಗಾಯಿತು . . ಸಾಯಂಕಾಲ ಮನೆಗೆ ಹೋದರೆ ಊಟವಿಲ್ಲ, ಅಚ್ಚೇರು ಅವಲಕ್ಕಿ ಮೊಸರು ಇಷ್ಟೆ. ಏಕಾದಶಿಯ ಸುಖ ಏನು

*ಒಂದು ಜಾತಿಯ ಅಕ್ಕಿಯ ಹೆಸರು.

ಭವಿಸಬೇಕಾದರೆಂತೂ ಕೆಂಪು ಸೀರೆ ಉಟ್ಟೇಹುಟ್ಟಬೇಕು ....
ಸಾಕು ಇವರ ಪುರಾಣ. ರಾಮಾಯಣ ಇಷ್ಟು ಓದುವ ...
(ರಾಮಾಯಣ ತೆರೆಯುತ್ತಲೇ ನಗುವನು.) ಹ್ಹ ಹ್ಹ "ದಶಶಿರನ .."
(ಎಂದು ಓದುವನು.)

(ಪ್ರವೇಶ ರಾಮಣ್ಣಯ್ಯ.)

ಹ್ಹ ಹ್ಹ ... ಬಂದೆಯೋ ರಾಮಣ್ಣ ... ನಿನ್ನನ್ನು, ಮಳೆ ಬಂದಿತು ಎಂದು ನಿನ್ನ ಹೆಂಡತಿ ನೇಗಿಲು ನೊಗ ಹೊರಿಸಿ, ಗದ್ದೆ ಉಳಲಿಕ್ಕೆ ಕಳುಹಿಸಿದಳೋ ಎಂದು ನೋಡಿದೆ. ಇಷ್ಟು ಹೊತ್ತಾದರೂ ಒಂದು ಹುಳು ಸಹ ಇಲ್ಲವಲ್ಲ. ಇಷ್ಟರಲ್ಲೇ ರಂಗಣ್ಣಯ್ಯನ ಲೆಕ್ಕಕ್ಕೆ ಒಂದು ಸೂಡಿ ಎಲೆ, ಮುಕ್ಕಾಲು ಸೇರು ಹೊಗೆಸೊಪ್ಪು ಖರ್ಚಾಗುತ್ತಿತ್ತು ....

**ರಾಮಣ್ಣಯ್ಯ:**— ಹ್ಹ ಹ್ಹ .... ರಂಗಣ್ಣಯ್ಯನ ತಮಾಷೆ ಅಂದರೆ ತಮಾಷೆಯಪ್ಪ. ಮನೆಯವಳು, ನೀನೆಂದ ಹಾಗೆಯೇ, 'ಏನು ಮಳೆ ಬಿದ್ದರೂ ಬೀಜ ಹಾಕುವುದಿಲ್ಲವೇ? ಗದ್ದೆಗೆ ಹೋಗುವದಿಲ್ಲವೇ— ಏನು?' ಎಂದು ಗದರಿಸಿದಳು. ನಾನೂ 'ಆಯ್ತು ಅದಕ್ಕೇ 'ಹೊರಟೆ' ಎಂದು ಎದ್ದೆ. ಅವಳು ಅಲ್ಲಿ ಉಳಿದಳು, ನಾನು ಇಲ್ಲಿಗೆ ಬಂದೆ.

**ರಂಗ:**— ನಿನಗೆ ನಾನು ಅಂದದ್ದೇನು? ಆ ಸುಡುಗಾಡು ಮನೆಯವರ ಹೆಣ್ಣು ಬೇಡ. ಅವರ ಕುಲವೇ ಹರಕು ಬಾಯಿಯ ಕುಲ. ಅಲ್ಲಿಯ ಹುಡುಗಿ ತಂದರೆ ನಿನ್ನನ್ನು ಸಂತೆಯಲ್ಲಿ ಆರು ಕಾಸಿಗೆ ಮಾರಿ, ಮೂರು ಕಾಸಿನ ಹುರಿಯಕ್ಕಿ ಕೊಂಡು, ಇನ್ನು ಮೂರು ಕಾಸು ಸೊಂಟಕ್ಕೆ ಸಿಕ್ಕಿಸಿಕೊಂಡು ಬಂದಾಳು ಅಂದಿದ್ದೆನಲ್ಲ. ನೀನು ಕೇಳುತ್ತೀಯಾ? ಹುಡುಗಿ ಬೆಳ್ಳಗಿದ್ದಾಳೆ—

ಎಂದು ಲಗ್ನವಾದೆ. ಬೆಳ್ಳಗಿದೆ ಎಂದು ಜೇಡಿ ಬಳೆದ ಗೋಡೆ ಮದುವೆಯಾಗಬಹುದಿತ್ತು ಅದರ ಬದಲು.

**ರಾಮು:**— ಆಯಿತಲ್ಲ; ಅದರ ಸುದ್ದಿ ಬಿಡು. ಇನ್ನೂ ಹೊಸ ಹುಡುಗಿ. ಸಂಸಾರದಲ್ಲಿ ನುರಿತ ಮೇಲಲ್ಲವೇ ಸುಖದುಃಖ ಗೊತ್ತಾಗುವುದು? ಅಲ್ಲದೆ ಅವಳ ಹತ್ತಿರ ಜಗಳವಾಡಿದರೆ ಮೊದಲಿನ ಹೆಂಡತಿಯ ಮಕ್ಕಳ ಜೀವತಿಂದಾಳಲ್ಲ. ಅಂತು ಅಡುಗೆಗಿಡುಗೆ, ತನ್ನ ಕೆಲಸ ಎಷ್ಟು ಬೇಕೋ ಅಷ್ಟು ಚೊಕ್ಕ ವಾಗಿಯೇ ಸಾಗಿಸಿಕೊಂಡು ಹೋಗುತ್ತಾಳೆ. ಅಡುಗೆ ಅನ್ನು ವಾಗ ನೆನಪಿಗೆ ಬಂತು—ಅವಳು ನೆರೆದು ಮನೆಗೆ ಬಂದ ಮೇಲೆ ನಿನ್ನನ್ನು ಮನೆಗೆ ಕರೆಯಲಿಲ್ಲ ಅಲ್ಲವೇ? ನನಗೂ, ಕರೆದು ಒಂದು ದಿನ ಹುಳಿಯನ್ನ ನಿನಗೆ ಮಾಡಿಸಿ ಹಾಕಬೇಕು ಎಂದಿತ್ತು.

**ರಂಗ:**— ಏನು! ಹುಳಿಯನ್ನ— ಅನ್ನುತ್ತಲೇ ನಿಲ್ಲಿಸಿದೆ. ನನಗೆ ಪರಮಾನಗಿರಮಾನ್ನ ಇದ್ದರೆ ಅಜೀರ್ಣವಾದೀತು— ಎಂದು ಗ್ರಹಿಸಿದೆಯಾ?

**ರಾಮು:**— ಹಾಗಲ್ಲ ರಂಗಣ್ಣ, ಅವಳ ಹುಳಿಯನ್ನದ ಕೈ ಅಂದರೆ ಅಂಥದು.

**ರಂಗ:**— ಹೌದು, ಹೌದು, ಅವಳಿಗೇ ಹುಳಿ ಅಟ್ಟಿದ್ದ ಮೇಲೆ ಅನ್ನ ಸುಮ್ಮನಿರುತ್ತದೆಯೇ! ಅದಗಲ್ಲೂ ಬೇರೆ, ಅವಳ ಅಪ್ಪ ಬೆಂಗ ಳೂರಲ್ಲಿ ಯಾರೋ ಮೂರು ನಾಮದವರ ಮನೆಯಲ್ಲೇ ಅಡು ಗೆಗೆ ಇದ್ದನಂತೆ. ಮೂರು ನಾಮದವರು ಅಂದರೆ, ಹೆಣ ಸತ್ತರೆ ಹುಳಿಯನ್ನದಲ್ಲಿ ಹೂಳಿಡುವವರು.

**ರಾಮು:**— ನೀನು ಒಂದು ಸಾರಿ ಉಂಡರೆ ಇಷ್ಟೆಲ್ಲ ತಮಾಷೆಮಾಡ ಲಿಕ್ಕಿಲ್ಲ—

**ರಂಗ:**— ಆಗಲಿ, ಆಗಲಿ, ನಿನ್ನ ಹೆಂಡತಿಯು ನಳಪಾಕ ಒಂದು ದಿನ ಊಟಮಾಡಲಿಕ್ಕೆ ಬರುತ್ತೇನೆ. ನಿನ್ನೊಟ್ಟಿಗೆ ನನಗೂ ಮಂಗಳಾರತಿ ಮಾಡಿದರೆ ಮಾತ್ರ ದೇವರೇ ಗತಿ. ಇರಲಿ ಬಿಡು. ಈಗ ರಾಮಾಯಣ ತೆಗೆಯಲೇ, ಈ ಗೀತೆ ಪಾರಾಯಣ ಶುರುಮಾಡಲೇ?

**ರಾಮು:**— ಇವತ್ತೆಲ್ಲಿನ ಗೀತೆ ತಂದೆ? ಇಷ್ಟು ದಿನ ಬರೇ ನಿನ್ನ ರಾಮಾಯಣ ಕೇಳಿ ಕೇಳಿ ಸಾಕಾಗಿತ್ತು. ಈಗ ಭಗವದ್ಗೀತೆ ಬೇರೆ ಬಂತೆ! ಆದರೂ ರಂಗಣ್ಣನ ದೈವಭಕ್ತಿಯಂದರೆ ಅಪಾರವಪ್ಪ. ಸದಾ ಪುರಾಣ ಗೀತೆಯೆಂತಲೇ ಇದ್ದಾನೆ ಪುಣ್ಯಾತ್ಮ.

**ರಂಗ:**— ಏ ಮಂಕು, ನಿಜಕ್ಕೂ ಗೀತೆ ಹೌದೆಂದು ತಿಳಿದೆಯಾ? ಇಸ್ಪೀಟು ಪುರಾಣ ಶುರುಮಾಡುವಾ–ಎಂದು ಹೇಳಿದೆ ನಾನು.

**ರಾಮು:**— ಹ್ಹ ಹ್ಹ ಹ್ಹಾ. ರಂಗಣ್ಣನ ತಮಾಷೆಯೇ! ನಾನು ನಿಜಕ್ಕೂ ಗೀತೆಯೇ ಎಂದು ತಿಳಿದಿದ್ದೆ . . ಇಸ್ಪೀಟೇ . . ಹ್ಹ ಹ್ಹ . . . ಇಸ್ಪೀಟು ಅಂದರೆ, ಇಬ್ಬರೇ ಏನು ಆಡುವುದು? ಬೇರೆಯಾರೂ ಇಲ್ಲ. ಆಡಿದರೆ ಕತ್ತೆ ಆಟ ಆಡಬೇಕು. ಆಡುವ ಮೊದಲೇ ಕತ್ತೆ ಯಾರು ಆಗುತ್ತಾರೆ ಅನ್ನಬಹುದು.

**ರಂಗ:**— ಹೌದು ಹೌದು. ರಂಗಣ್ಣಯ್ಯನಿಂದ ಕತ್ತೆ ಅನಿಸಿಕೊಂಡರೆ ನಿನಗೆ ಅವಮಾನ ನಿನ್ನ ಆ ಜೇಡಿ ಹುಡುಗಿ ನಿನ್ನನ್ನು ಕತ್ತೆಯಾಗಿ ಮಾಡಿದರೂ ನಿನಗೆ ಸಿಟ್ಟಿಲ್ಲ.

**ರಾಮು:**— ಸಾಕು, ಸುಮ್ಮನಿರು. ರಾಮಾಯಣ ಓದು, ಬಹಳ ದಿನ ಆಯಿತು ಕೇಳದೆ.

**ರಂಗ:**— ರಾಮಾಯಣವೇ! ಆಯ್ತು ಓದುವ. ನಾಲ್ಕು ಜನ ಆಗುವ ವರೆಗೆ ಅದೇ ಗತಿ. (ಓದುತ್ತ) ಹ್ಹ. ಹ್ಹ . . .

**ರಾಮು:**— ಏನು ನಕ್ಕು ಬಿಟ್ಟೆ?

**ರಂಗ:**— ನೀನು ಬರುವಾಗಲೂ ಅದನ್ನೇ ಕಂಡು ನಕ್ಕದ್ದು. "ದಶಶಿರನ"— ಎಂದು ಇದೆಯಲ್ಲ. ನನಗೆ ಇಷ್ಟು ರಾಮಾಯಣ ಓದಿದರೂ 'ಈ ದಶಶಿರನ' ಬಂದ ಕೂಡಲೆ ನಗುವು ಬರುವುದೇ. ಆ ಮುಂಡೇ ಗಂಡ ಹತ್ತು ತಲೆ ಹೊತ್ತುದಾದರೂ ನಿಜವೇ? ಅದನ್ನು ತೆಗೆದುಕೊಂಡು ಮಲಗುವುದು ಹೇಗೆ? ಮಲಗಿದರೆ ಶರೀರ ಮಗುಚಲಿಕ್ಕಿಲ್ಲ. ಹೆಣ ಬಿದ್ದ ಹಾಗೆ ಬಿದ್ದಿರಬೇಕು. ಶೀತ ಆದರೆಂತು, ತೆನ್ನಾಲಿ ರಾಮಕೃಷ್ಣನು ಕಾಳಿಕಾಂಬೆಗೆ ಅಂದ ಹಾಗೆ— ಸಿಂಬಳ ತೆಗೆಯಲು ಬಲು ಪಜೀತಿ. ಆದರೂ ಚಿಂತೆ ಇಲ್ಲ. ಇಪ್ಪತ್ತು ಕೈಗಳಿವೆ ಯಂತೆ.

**ರಾಮು:**— ಹತ್ತು ತಲೆಯಿದ್ದರೆ, ಹತ್ತು ಬಾಯಿಗಳುಂಟು ಎಂದಾಯಿತು.

**ರಂಗ:**— ತಲೆಯಿಲ್ಲದವರಿಗೂ ಬಾಯಿಯಿರುತೆ

**ರಾಮು:**-ಹಾಗಲ್ಲವೋ? ಹತ್ತು ಬಾಯಿಗಳಿಂದಲೂ ಅವನು ಉಣ್ಣುತ್ತಿದ್ದನೋ ಎಂದು. ಒಂದು ಹೊಟ್ಟೆಯಿರುವಾಗ ಹತ್ತು ಬಾಯಿಗಳಿಂದ ತಿನ್ನುವುದು ಏಕೆ? ಒಂದೇ ಬಾಯಿಯು ಸಾಕು.

**ರಂಗ:**— ಹೌದು ಹೌದು, ಜೋರಿನ ಹೆಂಗುಸು ಮನೆಯಲ್ಲಿದ್ದರೆ ಹತ್ತು ಬಾಯಿಗಳಿಗೆ ಒಂದು ಬಾಯಿ ಸಾಕು.

**ರಾಮು:**— ನಿನ್ನದು ಇಲ್ಲದ್ದೇ ಕುತಂತ್ರದ ಮಾತು.

**ರಂಗ:**— ಮತ್ತೆ ರಾವಣನಿಗೆ ಇಲ್ಲದ ಹತ್ತು ತಲೆ ಇತ್ತು ಅನ್ನುವಾಗ . . .

**ರಾಮು:**—ರಾವಣನಿಗೆ ಹತ್ತು ತಲೆ ಇದ್ದಿರಲಿಲ್ಲ ಎಂತಲೋ ನಿನ್ನ ಅಭಿಪ್ರಾಯ?

**ರಂಗ:**—ಬರೆದವನಿಗೆ ತಲೆ ಕಡಿಮೆಯಾದ್ದರಿಂದ, ತನ್ನಂತೆ ಅವನೂ ಕೆಡಬಾರದು ಎಂದು, ತನಗಿಲ್ಲದ ಒಂಭತ್ತು ತಲೆ ಅವನಿಗಿರಿಸಿದ.

**ರಾಮು:**—ನೀನು ಇದೇ ಅರ್ಥ ಹೇಳಿದರೆ, ನಿನ್ನ ಮನೆ ಜಗುಲಿಯ ಮುಂದೆ ಅಮ್ಮಗಳೊಂದೂ ರಾಮಾಯಣ ಕೇಳಲಿಕ್ಕೆ ಸುಳಿಯ ಲಿಕ್ಕಿಲ್ಲ.

**ರಂಗ:**—ಅವರು ಬರಲಿಲ್ಲವೆಂದು, ವಕೀಲರು ಕಕ್ಷಿಗಾರರನ್ನು ಕಾದು ಕುಳಿತ ಹಾಗೆ, ನಾನು ಕುಳಿತಿರುವುದೂ ಇಲ್ಲ.

**ರಾಮು:**—ಹಾ! ನೀನು ವಕೀಲರು ಎನ್ನುವಾಗ ನೆನಪಾಯಿತು. ನನ್ನ ಆ ನಂಬ್ರ ಒಂದು ಗೋಪಿಂದ ಆಯಿತು. ವಕೀಲ ಶ್ಯಾಮರಾಯನಿಗೆ ಇಷ್ಟು ರುಸುಂ ತಿನಿಸಿದ್ದು ವ್ಯರ್ಥವಾಯಿತು.

**ರಂಗ:**—ಅಯ್ಯೋ ಮರುಳೇ, ಶ್ಯಾಮರಾಯ ನಿನ್ನ ವಕೀಲನೇ! ಅವನಿಗಾದರೆ ರುಸುಮೇ ಬೇಕಂದಿದ್ದಿಲ್ಲ. ಒಳ್ಳೇ ಎರಡು ಡಜನು ಬಿಸ್ಕುಟು ಆಂಬೊಡೆ ಮಾಡಿ ತೆಗೆದುಕೊಂಡು ಹೋಗಿ ಕೊಟ್ಟದ್ದರೆ ನಿನ್ನ ಕೇಸು ವ್ಯವಹರಿಸುತ್ತಿದ್ದ. ಗುಣ, ಈಗ ಆಗುವಷ್ಟೇ ಆಗುತ್ತಿತ್ತು ಅನ್ನು.

**ರಾಮು:**—ಅದೇನು ಹಾಗೆ ಅನ್ನುತ್ತೀ?

**ರಂಗ:**—ಹಾಗೆನ್ನದೆ ಏನು? ಅವನಿಗೆ ಏನು ವಕಾಲತು ಉಂಟು ಎಂದು ತಿಳಿದಿದ್ದಿ? ಅವನು, ಈ ಆಳ್ವ, ಆ ಕಿಣಿ, . . ಇವಕ್ಕೆಲ್ಲ ವಕಾಲತು ಉಂಟು ಎಂದು ತಿಳಿದೆಯಾ? ನಿನಗೆ ಭ್ರಮೆ. ಮನೆಯಲ್ಲಿ ಸುಮ್ಮನೆ ಬಿದ್ದಿರಲಾರದ ಶೈಲಿಗೆ ಕೋರ್ಟಗೆ ಹೋಗಿ ಬಿದ್ದಿರುವುದು. ಮುನ್ಸಿಫರು ಎದ್ದರೂ ಇವರು ಕುರ್ಚಿ

ಬಿಡುವ ಹಾಗಿಲ್ಲ. ಮೂರಣೆ ದಿನ ೧೦ ಘಂಟೆ ಆಗುವುದ ರೊಳಗೆ ಶಾಲೆ ಮಕ್ಕಳ ಹಾಗೆ ಇವರು ಹಾಜರು. ಬೇರೆ ವಕೀಲರು ಬಂದು ಇದ್ದ ಮೂರುವರೆ ಕುರ್ಚಿ ಭರತಿ ಮಾಡಿ ದರೆ ತಮಗೇನು ಗತಿ ಎಂಬ ಹೆದರಿಕೆ... ಹೌದೋ, ಈ ವಾರದ ಪೇಪರು ನಿನಗೆ ಬರಲಿಲ್ಲವೋ? ಒಂದಿಷ್ಟು ಸುದ್ದಿ ಹೇಳಿಬಿಡು. ಭಾರೀ ಮನುಷ್ಯ ಆದ ನಮ್ಮ ರಾಮಣ್ಣ, ಪೇಪರು ತರಿಸಿ ಓದುತ್ತಾನೆ ಅಂದ ಮೇಲೆ.

**ರಾಮು:**— ಪೇಪರು ತರಿಸುವುದು ಅಂದರೆ ನಾನೇನು ಹೇಳಿ, ಬರೆದು, ತರಿಸಿದ್ದಲ್ಲ. ಮಂಗಳೂರಿಗೆ ಹೋದಾಗ ನಮ್ಮ ಕಮ್ತಿ ವಕೀ ಲರು ಅಂದರು: 'ಇದೊಂದು ಪೇಪರು ಇರಲಿ ನಿಮಗೆ. ಊರಿನ ಸುದ್ದಿಯೆಲ್ಲ ಬರುತ್ತದೆ'— ಎಂದು. ಆಗಲಿ ಎಂದೆ. ಅವರ ಎದುರಿಗೆ 'ಇಲ್ಲ' ಅನ್ನಲಿಕ್ಕೆ ಬರುತ್ತದೆಯೇ? ಅಲ್ಲೇ ಒಣ ಧಾಲಿಗೆ ಮೂರು ರೂಪಾಯಿ ಜುಲುಮಾನೆ ತೆತ್ತು ಬಂದೆ. ಐದಾರು ತಿಂಗಳಾದುವು. ಬರುತ್ತಾ ಇದೆ. ಮುಂದಿನ ವರುಷ ಬೇಡ ಎನ್ನುವುದೇ ಸರಿ.

**ರಂಗ:**— ಇರಲಿ, ಯಾರಾರ ಮನೆ ಸುಟ್ಟಿತು; ಎಲ್ಲೆಲ್ಲಿ ಹೆಂಡತಿ ಗಂಡನಿಗೆ ಚೂರಿ ಹಾಕಿದಳು; ಯಾರಾರು ಕದ್ದು ಜೈಲಿಗೆ ಹೋದರು-ಎಂದು ಊರಿನ ಪುರಾಣವೆಲ್ಲ ಬರುತ್ತದೆ. ಕಸಬು ಇಲ್ಲದ ಒಬ್ಬ ನಾರದ ಮಂಗಳೂರಲ್ಲಿ ಕುಳಿತು ಸುದ್ದಿ ಜಮಾಯಿ ಸುತ್ತಿರುವಾಗ ನೀನು ಬಿಡಬೇಕೆ? ಈ ಸಾರಿ ಬರಲಿಲ್ಲವೋ— ಆ ವಜ್ರತೇಜವೋ, ಪಾಕವೋ ಅದರ ಸುದ್ದಿ. ಒಬ್ಬನು ಒಂದು ದಿನ ಅರ್ಧತೊಲೆ ತಿಂದರೆ ಮರುದಿನವೇ ಆನೆಯ ಹಾಗೆ ಆಗುತ್ತಾನಂತೆ. ನಿನ್ನ ಮಾತ್ಮಾಗಾಂಧಿಗೆ ಒಂದು ಸೇರು

ಕೊಡಿಸಿದರೆ ಒಂದು ಖಂಡಿಯಾದರೂ ತೂಕ ಹೆಚ್ಚೀತು . . . .
ಅದಿರಲಿ, ನಿನ್ನ ಮಾತ್ಮಾಗಾಂಧಿ ಸುದ್ದಿಯೇನು? ಇನ್ನೂ ಜೈಲಿನ ಒಳಗೇ ಇದ್ದಾನೆಯೋ ನಿನ್ನ ಮಾತ್ಮಾ. . . ಅಥವಾ ಹೊಲೆಯರ ಗುಡಿಯಲ್ಲಿದ್ದಾನೆಯೋ!

**ರಾಮು:**— ಏನೋ ಅಪ್ಪ. ಇವತ್ತಿನ ಪೇಪರಿನಲ್ಲಿ "ಮಹಾತ್ಮಾ ಗಾಂಧಿಯವರು ಲಂಡನಿಗೆ ರೌಂಟೇ ಕಾನ್ಫೆಸ್ರಿಗೆ ಹೋಗುವರು" ಎಂದಿದೆಯಪ್ಪ. ಎಲ್ಲಿ ಲಂಡನೋ, ಎಲ್ಲಿ ಗಾಂಧಿಯೋ! ಎಲ್ಲಿಂದೆಲ್ಲಿಗೆ ಹೋಗುವುದು! ಆದರೂ ಪುಣ್ಯಾತ್ಮನಪ್ಪ. ಬಲು ಕೀರ್ತಿಗೆ ಬಂದನು.

**ರಂಗ:**— ಕೀರ್ತಿಗೆ ನಮ್ಮ ಕಳ್ಳ ಬೊಗ್ಗು ಬರಲಿಲ್ಲವೇ? ನಾಳೆ ನೀನೂ ಬರಬಹುದು. ಹೌದೋ ರಾಮಣ್ಣ— ನಿನ್ನ ಮಾತ್ಮಾ ಗಾಂಧಿಯವರು ಲಂಡನಿಗೆ ಕಾಂಪ್ರೆಸ್ಸಿಗೆ ಹೋಗುವಾಗ ಒಂದಿಷ್ಟು ಹುಳಿಯನ್ನವನ್ನು ಮಾಡಿಸಿ ಕಳುಹಿಸಯ್ಯ. ಅಲ್ಲಿ ಬಿಳಿ ಮುಖದವರಿಗೆ ಅದನ್ನು ತಿನಿಸಿ, ಅವರು ಮರಳಾದರೆ, ಸ್ವರಾಜ್ಯ ಬರುವಾಗಲೇ ಗಾಂಧಿ ಮಾತ್ಮನಿಗೆ ಕೊಡಲಿಕ್ಕೂ ಸಾಕು. ಆ ಬಿಳಿ ಮಂಗಗಳು ಹುಳಿಯನ್ನ ಸ್ವಪ್ನದಲ್ಲಿ ತಿಂದಿರಲಿಕ್ಕಿಲ್ಲ.

**ರಾಮು:**— ಅದು ಹೌದಯ್ಯ. ಅವಕ್ಕೆ, ಹುಳಿಯನ್ನ ಈ ಪತ್ರೊಡೆ, ಹೋಳಿಗೆ ಎಂದರೆ ಭಾರಿ ಆಶ್ಚರ್ಯ ಕಾಣಲಿಕ್ಕೆ ಸಾಕು. ನಮ್ಮೂರಿಗೆ ಬಂದವ ಯಾರದು? "ಬೇತೆಟ್" ದೊರೆಯೋ? ಅವನಿಗೆ ಯಾರೋ ಎರಡು ಸುಕ್ಕಿನುಂಡೆ ಕೊಟ್ಟರಂತೆ. ಅವನಿಗೆ ಅವನ್ನು ಕಂಡು ಆಶ್ಚರ್ಯವಾಯಿತಂತೆ "ಇದು ಸಿಹಿ, ಇದು ಚೀಲದೊಳಗೆ ಹೇಗೆ ತುಂಬಿದ್ದಾರೆ" ಎಂದು ಕೇಳಿದನಂತೆ . . . ಹ್ಹ. ಹ್ಹ. ಹ್ಹ. ಹೌದೋ ರಂಗಣ್ಣ, ಈ ಬಿಳಿ ಜನಕ್ಕೆ ಬಾಲ

